# ಮಾನಸಿ

ತಿಂಗಳ ಪತ್ರಿಕೆ. ಜುಲೈ ೧೯೯೦



ಜಾತಿಯೊಳಗೊಂದು ಜಾತಿ:

– ಜಾತಿ ಮತ್ತು ಮಹಿಳೆ ಕೆಲವು ಸಂಬಂಧಗಳು.

ಆಟಕ್ಕೆ ಮುಂಚೆ ಅಗ್ನಿಪರೀಕ್ಷೆ

ಮನಸ್ವಿನಿ

ಬದುಕು

ಸ್ತ್ರೀ ಜನ್ಮ ಶಾಪವೆ?

# ಮಾನಸ

ಸಂಪುಟ : ೩ ಸಂಚಿಕೆ : ೭

ಜುಲೈ ೧೯೯೦

**ಸಂಪಾದಕೀಯ ಮಂಡಳಿ:**

ರಾಜೇಶ್ವರಿ ಎಚ್. ಎಸ್.,

ಚಂಪಾವತಿ ಎಚ್. ಎಸ್., ಸರಸ್ವತಿ ದು.,

ಸವಿತ ಎ., ಗೀತಾ ಜಿ. ಎಸ್.

**ಸಲಹೆ—ಸಹಕಾರ**

ಇಳಾವಿಜಯ

**ವಿಳಾಸ "ಮಾನಸ ತಿಂಗಳ ಪತ್ರಿಕೆ**

ಪಂಚಾಯಿತಿ ರಸ್ತೆ

ಕಾಡುಗೋಡಿ (ಪೊ)

ಬೆಂಗಳೂರು—**560067**

**ಬಿಡಿಪ್ರತಿ :2 ರೂ.**

**ಸೂಚನೆ :** ವಾರ್ಷಿಕ ಚಂದಾ :20ರೂ.,

ಆಜೀವ ಚಂದಾ : **250**ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು.

ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.

ಮೂಲಕ ಸ್ವೀಕರಿಸಲಾಗುವುದು.

**ಈ ಸಂಚಿಕೆಯಲ್ಲಿ.........**



# ಸಂಪಾದಕೀಯ

ತನ್ನ ಕಾಮತೃಷೆಯನ್ನು ತಣಿಸಿಕೊಳ್ಳಲು ಬೇರೊಬ್ಬ ಸ್ತ್ರೀಯಲ್ಲಿ ಹೋದ ಗಂಡನಿಗಾಗಿ ಹೆಂಡತಿ ಎರಡು ವರ್ಷಗಳು ಕಾಯಬೇಕೆಂದು ಮನು ಎಷ್ಟೋ ಸಾವಿರ ವರುಷಗಳ ಹಿಂದೆ ಹೇಳಿದ. ಅಲ್ಲಿಂದತ್ತಲಿಗೆ ಗಂಡನನ್ನು 'ಬುಟ್ಟಿಯಲ್ಲಿ ಹೊತ್ತು' ಸೂಳೆಮನೆ ತಲುಪಿಸುತ್ತಿದಂತಹ ಸುಮತಿ ಮಂದಕ್ಕೆ ಒಂದು ಪರಿಕಲ್ಪನೆಯೆ ಆದಳು. ತಮ್ಮ ಹೆಂಗಸರನ್ನು ಆದರ್ಶ ಸುಮತಿಯಾಗಬೇಕೆಂದು ಒತ್ತಾಯಿಸುವ ಗಂಡು ಮನಸ್ಸಿನ ನಿರಂತರ ಬಲವರ್ಧನೆಯ ಕ್ರಿಯೆ ನಡೆದಿದೆ ಇಲ್ಲಿ ಈ ಸಂಸ್ಕೃತಿಯಲ್ಲಿ. ಹಾಗೆಯೇ ಆದರ್ಶ ಸುಮತಿಯರಾಗಲು ಶತಾಯಗತಾಯ ಸೆಣಸಿದ ಸ್ತ್ರೀಯರನ್ನು ಹುಟ್ಟುಹಾಕಿದ ಪರಂಪರೆ ಕೂಡ ಇದು.

ನಮ್ಮದು ಆಧುನಿಕ ಯುಗ. ಆಧುನಿಕ ಸ್ತ್ರೀವಾದ ಹರಿದು ಬಂದು ದಶಕಗಳೆರಡೇ ಸವೆಯುತ್ತಾ ಬಂದಿದೆ. ಪ್ರಾರಂಭಕ್ಕೆ ಈ ಸ್ತ್ರೀವಾದ ಹೊತ್ತು ತಂದ ಲೈಂಗಿಕ ವಿಮೋಚನೆಯ ಪರಿಕಲ್ಪನೆಯನ್ನು ಶೋಷಿತ ಬದುಕಿನಲ್ಲೊಂದು ಆಶಾಕಿರಣವೆಂಬಂತೆ ಕಂಡಿತು ಸುಮತಿಯ ಪರಂಪರೆ. ಜಿಡ್ಡುಗಟ್ಟಿದ ಬದುಕುಗಳಲ್ಲಿ ಹೊಸ ಚಾಲನೆ ಸಿಕ್ಕಿದಂತೆ. ಹೊಸತನದ— ಲವಲವಿಕೆಯ ಹುಚ್ಚು ಹೊಳೆ ಹರಿದಂತೆ. ಈ ಹೊಳೆಯಲ್ಲಿ ರ್‍ಯಾಡಿಕಲ್ ಗಂಡಂದಿರ ದಂಡು ದಂಡೇ ಹರಿದು ಬಂತು. ಇವರೆಲ್ಲಾ ಆಧುನಿಕ ಸ್ತ್ರೀವಾದದ ಬೆಂಬಲಿಗರು — ಹಿತಚಿಂತಕರು! ಆದರೆ ಇವರೆಲ್ಲಾ ಸುಮತಿಯಂತಹ ಹೆಂಡತಿಯರ ಗಂಡಂದಿರು ಎಂಬುದು ಸ್ವಲ್ಪ ನಿಧಾನಕ್ಕೇ ಅರ್ಥವಾದ ಸತ್ಯ. ತಮ್ಮ ಕಾಮವೈಕಲ್ಯಕ್ಕೆ ರ್‍ಯಾಡಿಕ್ಯಾಲಿಟಿಯ ಬಣ್ಣ ಸಿಕ್ಕಿದ್ದು ನಿಧಿ ಸಿಕ್ಕಿದಂತೆಯೇ ಆಯಿತು! ಬುದ್ಧಿವಂತ ಗಂಡಂದಿರ ರ್‍ಯಾಡಿಕ್ಯಾಲಿಟಿಯ "ಮ್ಯಾನಿಪುಲೇಷ" ನಲ್ಲಿ ಕೊಚ್ಚಿಕೊಂಡು ಹೋದ ದಡ್ಡಿಯರು! ಗಂಡುಗಳ ವಿವಾಹೇತರ ಸಂಬಂಧಗಳಿಗೆ ಸುಲಭ ಸಮರ್ಥನೆ ದೊರೆತದ್ದು ಇಲ್ಲಿ. ಆಧುನಿಕ ಸ್ತ್ರೀವಾದದೊಂದಿಗೆ ಹುಟ್ಟಿಕೊಂಡ ಈ ಪ್ರವೃತ್ತಿಯನ್ನು ತುಂಬ ಗಂಭೀರವಾಗೇ ನೋಡಬೇಕಾಗುತ್ತದೆ. ಹೊಸ ಡಿಸ್ಟೆಂಪರ್ ಹಚ್ಚಿಕೊಂಡ ಸುಮತಿಯ ಪರಂಪರೆ ಮುಂದುವರಿಯುತ್ತಿರುವ ಸ್ಥಿತಿ ಇಂದಿನದು. ಫೆಮಿನಿಸಂ ಅನ್ನು ಸ್ವಲ್ಪ ಚೆನ್ನಾಗೇ ಓದಿಕೊಂಡಿರುವ ಈ ರ್‍ಯಾಡಿಕಲ್ ಪುರುಷದಂಡು ಬದಲಾವಣೆ ಬಯಸುವ ಉತ್ಸಾಹಿ ತರುಣಿಯರಲ್ಲಿ ಅದನ್ನು ಆಕರ್ಷಕವಾಗಿ ಬೋಧಿಸಲೂ ಬಲ್ಲರು. ಪುರುಷ ಮನಸ್ಸಿನ ಅತೀ ಅಸಹ್ಯಗಳು ಸುಂದರವೆಂಬಂತೆ ಮ್ಯಾನಿಪ್ಯುಲೇಟ್ ಆಗುತ್ತ ಉತ್ಸಾಹಿ ತರುಣಿಯರನ್ನು ಮೋಸಗೊಳಿಸುವ ಪ್ರವೃತ್ತಿ ಇದು. ನಮ್ಮ ಹುಡುಗಿಯರು ಇನ್ನೂ ಜಾಣೆಯರಾಗಬೇಕಾಗಿದೆ!

# ಜಾತಿಯೊಳಗೊಂದು ಜಾತಿ

## ಜಾತಿ ಮತ್ತು ಮಹಿಳೆ–ಕೆಲವು ಸಂಬಂಧಗಳು



ವಿ. ಗಾಯತ್ರಿ

ಆಧುನಿಕ ಸ್ತ್ರೀವಾದ ಗುರುತಿಸಿಕೊಂಡ "ವಿಮೋಚನೆ"ಯ ಅಂಶಗಳು ನಮ್ಮ ಜಾತಿ | ವರ್ಗ ಆಧಾರಿತ ವ್ಯವಸ್ಥೆಯ ಪುಸ್ತಕಗಳಲ್ಲಿನ ಹೆಂಗಸರ ಬದುಕಿನಲ್ಲಿ ತಂತಾನೇ ಹಾಸುಹೊಕ್ಕು ಪಡೆದಿದೆ— ಎನ್ನುವ ದಿಕ್ಕಿನಲ್ಲಿನ ವಿಫುಲ ಚರ್ಚೆ ಮಹಿಳಾ ಚಳುವಳಿಯಲ್ಲಿ ನಡೆದಿದೆ, ಇಂತಹ ದೃಷ್ಟಿಕೋನಗಳು ವ್ಯವಸ್ಥೆಯ ನಿರ್ಧಿಷ್ಟ ಸ್ತರಗಳಲ್ಲಿನ ಹೆಂಗಸರ ಸಮಸ್ಯೆಯ ಸ್ವರೂಪವನ್ನು ಇಡಿಯಾಗಿ, ಎಲ್ಲಾ ನಿಟ್ಟಿನಿಂದಲೂ ನೋಡುವಲ್ಲಿ ಮಿತಿಗಳನ್ನು ಹೊಂದಿದೆ; ಇಂತಹ ಗೊಂದಲಮಯ ಅಂಶಗಳು ನಿಜಸಮಸ್ಯೆಯನ್ನು ಮರೆಮಾಚಿ, ಎಲ್ಲವನ್ನೂ ಕೆಲವೇ ವಿಚಾರಗಳಿಗೆ ಇಳಿಸಿಬಿಡುವ ಅಪಾಯವಿದೆ ಎಂಬೆಲ್ಲಾ ಆರೋಪಗಳ ನಡುವ ಮತ್ತಷ್ಟು ಗೊಂದಲಗಳು ದ್ವಂದ್ವಗಳು ಹುಟ್ಟಿಕೊಳ್ಳುತ್ತಿರುವ ಸಂದರ್ಭದಲ್ಲೇ "ಮಹಿಳೆ ಮತ್ತು ಜಾತಿ ಪದ್ಧತಿಯನ್ನು ಕುರಿತ ಚರ್ಚೆಯನ್ನು ಕೈಗೆತ್ತಿಕೊಳ್ಳುವುದು ಕೆಲ ಕಾರಣಗಳಿಂದ ಮುಖ್ಯ ಎಂದು ನಾನು ಭಾವಿಸಿಕೊಂಡಿದ್ದೇನೆ. ಏಕೆಂದರೆ ಮಹಿಳಾ ಚಳುವಳಿ ಹೆಚ್ಚೆಚ್ಚು ಅರ್ಥಪೂರ್ಣ ಮೌಲ್ಯಗಳನ್ನು ಸೃಷ್ಟಿಸಿಕೊಳ್ಳುತ್ತಾ ನಡೆದಂತೆ, ಇಂತಹ ಅಂಶಗಳೆಡೆಗೆ ಯಾವುದೇ ಪೂರ್ವಾಗ್ರಹಗಳಿಂದ ಹೊರತಾದ ದೃಷ್ಟಿ ತುಂಬಾ ಮುಖ್ಯ ಆಗುತ್ತದೆ. ಜಾತಿ ಸಂಬಂಧೀ ಮೌಲ್ಯಗಳು ಸ್ತ್ರೀ ಸಂಬಂಧೀ ಮೌಲ್ಯಗಳೊಂದಿಗೆ ಹೊಂದಿರುವ ಸಂಬಂಧವನ್ನು ಯಥಾವತ್ತಾಗಿ ಹಿಡಿಯುವ ಪ್ರಯತ್ನ ಮಾಡಬೇಕಾಗುತ್ತದೆ. ಈ ನಿಟ್ಟಿನಲ್ಲಿ ಮಹಿಳೆ ಮತ್ತು ಜಾತಿ ನಡುವಿನ ಸಂಬಂಧದ ಸ್ವರೂಪವನ್ನು ಹಿಡಿಯುವ ಪ್ರಯತ್ನವನ್ನೂ ಇಲ್ಲಿ ಮಾಡಲಾಗಿದೆ.

**ಧರ್ಮಶಾಸ್ತ್ರಗಳು:** ಜಾತಿಯ ಕಲ್ಪನೆ ವರ್ಣಾಶ್ರಮ ವ್ಯವಸ್ಥೆಯೊಟ್ಟಿಗೆ ಹುಟ್ಟಿಕೊಂಡಿತು ಎಂದು ಸ್ಥೂಲವಾಗಿ ಭಾವಿಸುವುದಾದರೆ(ಇದರ ಪರ— ವಿರೋಧೀ ಚರ್ಚೆಗಳೇನೇ ಇದ್ದರೂ) ಆ ಕಡೆಗೆ ಒಂದು ನೋಟ ಕೊಡುವುದು ಅವಶ್ಯವಾಗುತ್ತದೆ. "ಆರ್ಯರು ಪ್ರಾರಂಭಿಸಿದ ಹಿಂದೂ ಸಂಸ್ಕೃತಿ"ಯು ಪಿತೃಪ್ರಧಾನವಾದದ್ದಾದರೂ, ಇದರ ಅತ್ಯಂತ ಪ್ರಾರಂಭಕ್ಕೆ ಹೆಣ್ಣಿನ ಸ್ಥಾನಮಾನ ಗಂಡಿಗೆ ಸಮಾನವಾಗಿದ್ದುದು ಕಂಡುಬರುತ್ತದೆ. ಆ ನಂತರಕ್ಕೆ ಕ್ರಮೇಣವಾಗಿ ಹೆಣ್ಣಿನ ಸ್ಥಾನಮಾನದಲ್ಲಿ ಉಂಟಾದ ಬದಲಾವಣೆಯನ್ನು ಗುರುತಿಸಲು ಎ. ಎಸ್. ಅಲ್ತೇಕರ್‌ರವರು ತಮ್ಮ ಖ್ಯಾತ ಪುಸ್ತಕ "ವಿಮೆನ್ ಇನ್ ಹಿಂದೂ ಸಿವಿಲೈಜೇಷನ್"ನಲ್ಲಿ ಕೊಡುವ ವಿಭಾಗೀಕರಣವನ್ನು ಇಲ್ಲಿ ತೆಗೆದುಕೊಳ್ಳಬಹುದು.

ಕ್ರಿ. ಪೂ. ೨೫೦೦ ರಿಂದ ಕ್ರಿ. ಪೂ. ೧೫೦೦ರ ವರೆಗೆ — ವೇದಗಳ ಕಾಲ.

ಕ್ರಿ. ಪೂ. ೧೫೦೦ ರಿಂದ ಕ್ರಿ. ಪೂ. ೫೦೦ರವರೆಗೆ — ಬ್ರಾಹ್ಮಣ್ಯಗಳ ಕಾಲ(ಬ್ರಾಹ್ಮಣ್ಯಗಳು ವೇದದ ಒಂದು ಭಾಗವಾಗುತ್ತವೆ.)

ಕ್ರಿ. ಪೂ. ೫೦೦ ರಿಂದ ಕ್ರಿ. ಶ. ೫೦೦ರವರೆಗೆ— ಸೂತ್ರ ಮತ್ತು ಪುರಾಣಗಳ ಕಾಲ. ಕ್ರಿ. ಶ. ೫೦೦ ರಿಂದ ಕ್ರಿ. ಶ. ೧೦೦೦ರವರೆಗೆ — ಸ್ಮೃತಿಗಳ ಕಾಲ.

ಈ ನಾಲ್ಕು ಕಾಲಗಳಲ್ಲಿ ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿನ ಸ್ಥಾನಮಾನಗಳು ಕೂಡ ಸ್ಥಿತ್ಯಂತರವನ್ನು ಗುರುತಿಸುತ್ತಾ ಹೋಗಬಹುದು.

ವೇದ ಪ್ರಾರಂಭ ಕಾಲಕ್ಕೆ ಹೆಣ್ಣು ಮಗುವಿನ ಜನನಕ್ಕೆ ಗಂಡು ಮಗುವಿನಷ್ಟು ಸ್ವಾಗತ ಇಲ್ಲದೇ ಹೋದರೂ, ಅದರೆಡೆಗೆ ಯಾವುದೇ ಬಗೆಯ ಧಿಕ್ಕಾರವಿರಲಿಲ್ಲ. ಪ್ರಾರಂಭದ ಉಪನಿಷತ್ತೊಂದರಲ್ಲಿ ವಿದ್ವಾಂಸಳಾಗಬಲ್ಲಂತಹ ಹೆಣ್ಣುಮಗಳನ್ನು ಪಡೆಯಲು ಗೃಹಸ್ಥನೊಬ್ಬ ಮಾಡಬೇಕಾದ ವಿಧಿಯೊಂದನ್ನು ಕುರಿತಾದ ಉಲ್ಲೇಖವಿದೆ. ಉಪನಯನವು ಹೆಣ್ಣುಮಕ್ಕಳಿಗೆ ಗಂಡು ಮಕ್ಕಳಷ್ಟೇ ಸಾಮಾನ್ಯವಾಗಿದ್ದು ಅವರಿಗೆ ವಿದ್ಯಾಭ್ಯಾಸದ ಎಲ್ಲ ಸೌಲಭ್ಯಗಳೂ ಇದ್ದವು. ಅವರು ಒಟ್ಟಿಗೆ ವಿದ್ಯಾಭ್ಯಾಸ ಪಡೆಯುತ್ತಿದ್ದರು ವೇದಾಭ್ಯಾಸದ ಜೊತೆಗೆ ಯಜ್ಞಗಳಿಗೆ ಸಂಬಂಧಿಸಿದ ವಿವಿಧ ಸಮಸ್ಯೆಗಳನ್ನೂ ಚರ್ಚೆಗೆ ಒಡ್ಡುವ "ಪೂರ್ವ ಮೀಮಾಂಸೆ" ಯಲ್ಲಿ ಅನೇಕರು ಪರಿಣತರಾಗಿದ್ದರು. ಸುಮಾರು ಕ್ರಿ. ಪೂ. ೧೦೦೦ದಲ್ಲಿ ಬರುವ ಮೈತ್ರೇಯಿ, ಗಾರ್ಗಿ ಮತ್ತು ಆತ್ರೇಯಿಯರನ್ನು ಇಲ್ಲಿ ಹೆಸರಿಸಬಹುದು.

ಯಾಜ್ಞವಲ್ಕ್ಯ ಋಷಿಯ ಹೆಂಡತಿಯಾದ ಮೈತ್ರೇಯಿಯು ಸ್ತ್ರೀ ಸಹಜವೆಂದು ಹೇಳಲ್ಪಡುವ ಉಡುಪು, ಆಭರಣಗಳೇ ಮುಂತಾದ ಆಸಕ್ತಿಗಳಿಗಿಂತ ಮಿಗಿಲಾದ ಅತ್ಯಂತ ಹೆಚ್ಚಿನ ಜ್ಞಾನದ ಹುಡುಕಾಟದಲ್ಲಿ ನಿರತಳಾಗಿರುತ್ತಾಳೆ.

ಮಹಾ ಬುದ್ಧಿವಂತೆಯೂ, ವಿದ್ಯಾಭ್ಯಾಸ ಪಡೆದವಳೂ ಆದ ಗಾರ್ಗಿ, ಜನಕ ರಾಜನ ಆಸ್ಥಾನದಲ್ಲಿನ ಆಧ್ಯಾತ್ಮ ಶಿಬಿರದಲ್ಲಿ ಮಹಾಜ್ಞಾನಿ ಯಾಜ್ಞವಲ್ಕ್ಯನನ್ನು ಎದುರಿಸಿ ನಿಲ್ಲುತ್ತಾಳೆ. ಯಾಜ್ಞವಲ್ಕ್ಯನಿಗೆ ಅತ್ಯಂತ ಗಟ್ಟಿಯಾದ ಆಧ್ಯಾತ್ಮಿಕ ಪ್ರಶ್ನೆಗಳ ಸವಾಲನ್ನು ಒಡ್ಡಿ ಅವನನ್ನು ದಂಗುಗೊಳಿಸುತ್ತಾಳೆ. ಅವಳ ಪ್ರಶ್ನೆಗಳಿಂದ ತತ್ತರಿಸಿದ ಯಾಜ್ಞವಲ್ಕ್ಯ ಸಾರ್ವಜನಿಕರೆದುರಿಗೆ ಆ ಪ್ರಶ್ನೆಗಳಿಗೆ ಉತ್ತರಿಸಲಾಗದೆಂಬ ನೆಪಹೂಡಿ ತಪ್ಪಿಸಿಕೊಳ್ಳುತ್ತಾನೆ. ಇಂತಹ ಒಂದು ಉದಾಹರಣೆ ಗಾರ್ಗಿ ಎಷ್ಟೊಂದು ಎತ್ತರದ ಬುದ್ಧಿಮಟ್ಟದಲ್ಲಿದ್ದಳೆಂದು ಸ್ಪಷ್ಟಪಡಿಸುತ್ತದೆ.

ಆತ್ರೇಯಿ ವಾಲ್ಮೀಕಿ ಋಷಿಯಲ್ಲಿ ವೇದಾಂತವನ್ನು ಕಲಿಯುತ್ತಿದ್ದ ಮತ್ತೊಬ್ಬ ಬುದ್ಧಿವಂತ ಹೆಣ್ಣು.

ವೇದಗಳಲ್ಲಿ ಹೆಂಗಸರದ್ದೇ ಅನೇಕ ಶ್ಲೋಕಗಳಿವೆ. ಅಪಾಲ, ಇಂದ್ರಾಣಿ, ಲೋಪಮುದ್ರ, ಘೋಷ ಮುಂತಾದ ಹಲವು ಹತ್ತು ಹೆಂಗಸರ ಶ್ಲೋಕಗಳು ಕಂಡು ಬರುತ್ತವೆ. ಭೂಮಿಯಿಂದ ಹುಟ್ಟಿ ಆಕಾಶವನ್ನು ಮುಟ್ಟುವಂತಹ ಅತ್ಯಂತ ಉದಾತ್ತ ಬದುಕು ಅನೇಕ ಚಿಂತಕಿಯರ ಆಶಯ.

ವಿವಾಹ ಸ್ತ್ರೀ ಪುರುಷರಿಬ್ಬರಿಗೂ ಕಡ್ಡಾಯವಾದುದೆಂದೂ, ಅವಿವಾಹಿತನು ಅಪವಿತ್ರನೆಂದೂ ವೇದಗಳು ಹೇಳಿದರೂ ಹೆಣ್ಣು ಅವಿವಾಹಿತೆಯಾಗಿ ಉಳಿಯುವುದನ್ನು ಅವು ಖಂಡಿಸುವುದಿಲ್ಲ. ವಿವಾಹದ ವಯಸ್ಸು ಹೆಣ್ಣುಮಕ್ಕಳಿಗೆ ೧೭-೧೮ ಇದ್ದು ಅವರು ತಮ್ಮ ಸಂಗಾತಿಗಳನ್ನು ಸ್ವತಹ ಆರಿಸಬಹುದಾಗಿತ್ತು. ವಿಧವೆಯು ಜೀವನಪಿಡೀ ಒಂಟಿಯಾಗಿಯೇ ಉಳಿಯುವ ಇಲ್ಲವೇ ಪುನರ್ವಿವಾಹ ಮಾಡಿಕೊಳ್ಳುವ ಇಲ್ಲವೇ ಸಂಯೋಗ(ಭಾವನನ್ನು ಕೂಡುವುದು) ಹೊಂದುವ ಅವಕಾಶಗಳು ಸಮನಾಗಿದ್ದುವು.

ಕುಟುಂಬದ ಹಿರಿಯರು ತಮ್ಮ ಮನೆಗೆ ಬಂದ ಹೆಣ್ಣುಮಕ್ಕಳೆಡೆಗೆ ಅತ್ಯಂತ ವಿಶ್ವಾಸಪೂರಿತರಾಗಿರುತ್ತಿದ್ದರು. ಹೆಣ್ಣುಮಕ್ಕಳು ಯಾವುದೇ ಚರ್ಚೆಯಲ್ಲಿ ಹಿರಿಯರೊಟ್ಟಿಗೆ ಪಾಲ್ಗೊಳ್ಳುವ ಎಲ್ಲಾ ಅವಕಾಶಗಳಿದ್ದುವು. ಹೆಂಗಸರು ಸ್ವತಹ ಯಜ್ಞಗಳನ್ನೂ ಮಾಡುವ ಅವಕಾಶವಿದ್ದಿತು. ಉದಾಹರಣೆಗೆ ನೆಲದ

ಫಲವತ್ತತೆ ಮತ್ತು ಉತ್ತಮ ಬೆಳೆಗಳಿಗಾಗಿ ಸಲ್ಲಿಸುವ ಯಜ್ಞಗಳನ್ನೂ ಅವುಗಳ ಪ್ರತೀಕವಾದ ಹೆಂಗಸರೇ ಮಾಡಬೇಕಾಗಿದ್ದಿತು.

ಪರದಾ ಪದ್ಧತಿಯು ಆಚರಣೆಯಲ್ಲಿರಲಿಲ್ಲ ಮತ್ತು ಹೆಂಗಸರು ಸಾರ್ವಜನಿಕ ಕೂಟಗಳಲ್ಲಿ ಮುಕ್ತವಾಗಿ ಭಾಗವಹಿಸಬಹುದಾಗಿತ್ತು.

ಈ ಅಂಶಗಳೊಟ್ಟಿಗೆ ವೇದಗಳ ಉತ್ತರ ಕಾಲಕ್ಕೆ ಹೆಣ್ಣು ಮುಟ್ಟಾದಾಗ ಮೈಲಿಗೆಯಾಗುತ್ತಿದ್ದುದುಂಟು. ಅವಳಿಗೆ ಆಸ್ತಿಯ ಹಕ್ಕಿರಲಿಲ್ಲ.

ಇಲ್ಲಿಂದ ಮುಂದೆ ವೇದಗಳ ಉತ್ತರ ಭಾಗ, ಸೂತ್ರಗಳು, ಪುರಾಣ ಮತ್ತು ಸ್ಮೃತಿಗಳ ಕಾಲಕ್ಕೆ ಕ್ರಮೇಣ ನಡೆದು ಹೋದಂತೆ ಹೆಣ್ಣಿನ ಸ್ಥಾನಮಾನವೂ ಕ್ರಮೇಣ ಕೆಳಗಿಳಿಯುತ್ತಾ ಹೋಗುವುದು ಕಂಡುಬರುತ್ತದೆ.

ಹೆಣ್ಣುಮಕ್ಕಳ ಉಪನಯನ ಪದ್ಧತಿಯು ಔಪಚಾರಿಕತೆಯ ರೂಪ ತಾಳುತ್ತಾ ಹೋಗಿ ಅಂತಿಮವಾಗಿ ಅಳಿಸಿಹೋಗುತ್ತದೆ. ಹೆಣ್ಣುಮಕ್ಕಳ ವಿದ್ಯಾಭ್ಯಾಸ ಕೊನೆಗೊಳ್ಳುತ್ತದೆ, ಧರ್ಮಸೂತ್ರಗಳ ಲೇಖಕರು ಹೆಣ್ಣುಮಕ್ಕಳು ಮುಟ್ಟಾಗುವ ಮುನ್ನವೇ ವಿವಾಹವಾಗಬೇಕೆಂದು ತರ್ಕಿಸುತ್ತಾರೆ. ಹೀಗಾಗಿ ಹೆಣ್ಣುಮಕ್ಕಳ ವಿವಾಹದ ವಯಸ್ಸು ೮–೧೦ಕ್ಕೆ ಇಳಿಯುತ್ತದೆ. ಆದರೆ ಇದಕ್ಕೆ ಅಪವಾದಗಳೂ ಇಲ್ಲದಿಲ್ಲ, ರಾಮಾಯಣದ ಕಾಲಕ್ಕೆ ಬರುವ ಸೀತೆ ವಿವಾಹ ಸಮಯಕ್ಕೆ ಪ್ರಾಪ್ತ ವಯಸ್ಕಳಾಗಿದ್ದಳೆಂದು ತೋರಿಬರುತ್ತದೆ. ವಿವಾಹ ಎಷ್ಟೊಂದು ಕಡ್ಡಾಯವಾಗಿತ್ತೆಂದರೆ,

ಹೆಣ್ಣು ಮದುವೆಗೆ ಮುನ್ನ ಸತ್ತರೆ ಅವಳ ಕಳೇಬರಕ್ಕೆ ವಿವಾಹ ಮಾಡಿ ಸುಡಬೇಕೆಂದು ಪುರಾಣವೊಂದರಲ್ಲಿ ಉಲ್ಲೇಖಿಸಲಾಗುತ್ತೆ. ಹೆಣ್ಣಿಗೆ ಸೂಕ್ತ ಸಂಗಾತಿ ಸಿಗದಿದ್ದರೂ ಅವಳು ಮುಟ್ಟಿಗೆ ಮುನ್ನ ವಿವಾಹವಾಗಿಬಿಡಬೇಕೆಂದು ಯಮ ತನ್ನ ಸ್ಮೃತಿಯಲ್ಲಿ ಹೇಳುತ್ತಾನೆ. ನಂತರದಲ್ಲಿ ಬರುವ ಮನು, ಹೆಣ್ಣಿಗೆ ಸೂಕ್ತ ಸಂಗಾತಿ ದೊರೆಯದಿದ್ದಲ್ಲಿ ಅವಳು ಜೀವನ ಪರ್ಯಂತ ಅವಿವಾಹಿತಳಾಗಿಯೇ ಉಳಿಯಬಹುದೆಂದು ಹೇಳುತ್ತಾನೆ. ಆದರೆ ಅವನು ವಿವಾಹದ ವಯಸ್ಸನ್ನು ಹೆಚ್ಚಿಸುವುದಿಲ್ಲ.

ಹೆಣ್ಣು ತನ್ನ ಸಂಗಾತಿಯನ್ನು ಆರಿಸಿಕೊಳ್ಳುವುದಕ್ಕೆ ತಡೆಬೀಳುತ್ತದೆ. ಆದರೆ ಹಲವು ರಾಜಕುಟುಂಬಗಳಲ್ಲಿ ಸ್ವಯಂವರದಂತಹ ಹಲವು ಪದ್ಧತಿಗಳಿದ್ದಲ್ಲಿ ಹೆಣ್ಣು ತನ್ನ ಸಂಗಾತಿಯನ್ನು ಆರಿಸಿಕೊಳ್ಳಬಹುದಾಗಿತ್ತು. ವಾತ್ಸ್ಯಾಯನ ತನ್ನ ಕಾಮಸೂತ್ರದಲ್ಲಿ ಗಾಂಧರ್ವ ವಿವಾಹವನ್ನು ಕುರಿತು ಉಲ್ಲೇಖಿಸುತ್ತಾ ಗಂಡು—ಹೆಣ್ಣು ಪರಸ್ಪರ ಪ್ರೇಮಿಸಿ ಕೂಟಗಳಲ್ಲಿ ಸ್ನಾನ ಕೊಳಗಳಲ್ಲಿ ಒಟ್ಟಿಗೆ ಸೇರುವಂತಹ ಸಂದರ್ಭಗಳನ್ನು ಎತ್ತಿಹಿಡಿಯುತ್ತಾನಾದರೂ ಮತ್ತೊಬ್ಬ ಸ್ಮೃತಿಕಾರ ಬೌಧಾಯನ ಇದನ್ನು ಖಂಡಿಸುತ್ತಾನೆ.

ವಧುದಕ್ಷಿಣೆಯನ್ನು ಕುರಿತಾದ ಉದಾಹರಣೆಗಳು ಪುರಾಣಗಳಲ್ಲಿ ಕಂಡುಬರುತ್ತವೆ. ಗಾಂಧಾರಿ ಮಾದ್ರಿ ಕೈಕೇಯಿಯರ ಸಂದರ್ಭಕ್ಕೆ ಒಂದು ಬಗೆಯ ಪರಿಹಾರ ರೂಪದಲ್ಲಿ ವಧುದಕ್ಷಿಣೆಯ ನೀಡಿಕೆಯಾಗುತ್ತದೆ. ಆ ನಂತರದಲ್ಲಿ ಧರ್ಮಶಾಸ್ತ್ರಗಳ ಕಾಲಕ್ಕೆ ಅತ್ಯಂತ ಹೆಚ್ಚು ವಧುದಕ್ಷಿಣೆಯನ್ನು ಕೊಡುವ ವರನ ಕಡೆಯವರಿಗೆ ಹೆಣ್ಣುಮಕ್ಕಳನ್ನು ಸರಕುಗಳಂತೆ ಮಾರಾಟ ಮಾಡುವ ಆಚರಣೆ ಕಂಡುಬರುತ್ತದೆ, ಆದರೆ ಮನು

---

ವಧುದಕ್ಷಿಣೆಯನ್ನು ಕುರಿತಾದ ಉದಾಹರಣೆಗಳು ಪುರಾಣಗಳಲ್ಲಿ ಕಂಡುಬರುತ್ತವೆ. ಗಾಂಧಾರಿ ಮಾದ್ರಿ ಕೈಕೇಯಿಯರ ಸಂದರ್ಭಕ್ಕೆ ಒಂದು ಬಗೆಯ ಪರಿಹಾರ ರೂಪದಲ್ಲಿ ವಧುದಕ್ಷಿಣೆಯ ನೀಡಿಕೆಯಾಗುತ್ತದೆ. ಆ ನಂತರದಲ್ಲಿ ಧರ್ಮ ಶಾಸ್ತ್ರಗಳ ಕಾಲಕ್ಕೆ ಅತ್ಯಂತ ಹೆಚ್ಚು ವಧುದಕ್ಷಿಣೆಯನ್ನು ಕೊಡುವ ವರನ ಕಡೆಯವರಿಗೆ ಹೆಣ್ಣುಮಕ್ಕಳನ್ನು ಸರಕುಗಳಂತೆ ಮಾರಾಟ ಮಾಡುವ ಆಚರಣೆ ಕಂಡುಬರುತ್ತದೆ. ಆದರೆ ಮನು ತನ್ನ ಸ್ಮೃತಿಯಲ್ಲಿ ಇದನ್ನು ಕಟುವಾಗಿ ಖಂಡಿಸುತ್ತಾನೆ. "ಶೂದ್ರರು ಕೂಡ ವಧುದಕ್ಷಿಣೆಯನ್ನು ತೆಗೆದುಕೊಳ್ಳಕೂಡದು" ಎಂದು ಹೇಳುತ್ತಾನೆ. ಆದರೆ ನಂತರದ ಸ್ಮೃತಿಗಳ ಕಾಲಕ್ಕೂ ವಧುದಕ್ಷಿಣೆಯನ್ನು ಕುರಿತಾದ ಉಲ್ಲೇಖ ಎಲ್ಲೂ ಕಂಡುಬರುವುದಿಲ್ಲ.

---

ತನ್ನ ಸ್ಮೃತಿಯಲ್ಲಿ ಇದನ್ನು ಕಟುವಾಗಿ ಖಂಡಿಸುತ್ತಾನೆ "ಶೂದ್ರರು ಕೂಡ ವಧುದಕ್ಷಿಣೆಯನ್ನು ತೆಗೆದುಕೊಳ್ಳಕೂಡದು" ಎಂದು ಹೇಳುತ್ತಾನೆ. ಆದರೆ ನಂತರದ ಸ್ಮೃತಿಗಳ ಕಾಲಕ್ಕೂ ವರದಕ್ಷಿಣೆಯನ್ನು ಕುರಿತಾದ ಉಲ್ಲೇಖ ಎಲ್ಲೂ ಕಂಡು ಬರುವುದಿಲ್ಲ.

ವಿಧವಾ ವಿವಾಹ ತನ್ನ ಅಸ್ತಿತ್ವವನು ಕ್ರಮೇಣದಲ್ಲಿ ಸಂಪೂರ್ಣ ಕಳೆದುಕೊಳ್ಳುತ್ತದೆ. ಇದಕ್ಕೆ ಅಪವಾದವೆಂಬಂತೆ ಮಹಾಭಾರತದ ಉತ್ತರಾರ್ಧಕ್ಕೆ ಬರುವ ಉಲೂಚಿಯೆಂಬ ವಿಧವೆ ಅರ್ಜುನನ್ನ ವಿವಾಹವಾಗುತ್ತಾಳೆ.

ಮಹಾಭಾರತದ ಕಾಲಕ್ಕೆ ಸತಿ ಪದ್ಧತಿ ಪ್ರಚಲಿತದಲ್ಲಿದ್ದುದು ಕಂಡು ಬರುತ್ತದೆ. ಮಾದ್ರಿಯು ಇದಕ್ಕೆ ಗಮನಾರ್ಹ ಉದಾಹರಣೆಯಾಗುತ್ತಾಳೆ. ಆದರೆ ಅವಳ ಪ್ರೀತಿಯ ಆಳ ಅವಳನ್ನು ಸೆಳೆದುಕೊಳ್ಳುತ್ತದೆ. ಮನು, ವಿಷ್ಣು ಮುಂತಾದ ಸ್ಮೃತಿಕಾರರು "ವಿಧವೆ ತನ್ನ ಕರ್ಮಗಳನ್ನು ವೃದ್ಧಿಸಿಕೊಳ್ಳುವುದಕ್ಕಿಂತ ಸಹಗಮನ ಮಾಡುವುದೇ ಉತ್ತಮ" ಎಂದು ಹೇಳುತ್ತಾರೆ ಪರಾಸರನು ತನ್ನ ಸ್ಮೃತಿಯಲ್ಲಿ ಹೀಗೆ ಹೇಳುತ್ತಾನೆ "ಪತಿಯೊಂದಿಗೆ ಸಹಗಮನ ಮಾಡುವ ಸತಿಯು ತನ್ನ ಗಂಡನನ್ನು ನರಕದಿಂದೆತ್ತಿ ಸ್ವರ್ಗದಲ್ಲಿ ಅವನೊಟ್ಟಿಗೆ ಮೂರುವರೆ ಕೋಟಿ ವರ್ಷಗಳ ಕಾಲ ಸುಖಿಸುತ್ತಾಳೆ" ಆದರೆ ಇದೊಂದು ಮಧ್ಯ ತೋರಿಕೆಯಷ್ಟೇ ಪರಾಸರ ವಿಧವಾ ವಿವಾಹವನ್ನು ಉತ್ತೇಜಿಸುತ್ತಾನೆ.

ಸೂತ್ರ ಮತ್ತು ಪುರಾಣಗಳ ಕಾಲಕ್ಕೆ ಹೆಣ್ಣು ಹೊರಬಂದು ಸಾರ್ವಜನಿಕ ಒದುಕಲ್ಲಿ ಭಾಗವಹಿಸುವ ಅವಕಾಶದಿಂದ ಸಂಪೂರ್ಣ ವಂಚಿತಳಾಗುತ್ತಾಳೆ. ಪರದಾ ಪದ್ಧತಿ ಕ್ರಮೇಣ ಆಚರಣೆಗೆ ಬಂದು ಬಲಿಷ್ಠಗೊಳ್ಳುತ್ತದೆ, ಆದರೆ ಇದು ಪ್ರಾರಂಭವಾದದ್ದು ಅತ್ಯಂತ ಗೌರವಸ್ಥರ ಕುಟುಂಬಗಳಲ್ಲಿ ಒಂದು ಬಗೆಯ ಪ್ರತಿಷ್ಠೆಯ ರೂಪದಲ್ಲಿ. ಹೆಣ್ಣನ್ನು ವಸ್ತುವಂತೆ ಉಪಯೋಗಿಸಿಕೊಳ್ಳುವ ಆಚರಣೆಗಳು ತಲೆ ಎತ್ತುತ್ತಾ ಬಂದು ಬಲಿಷ್ಠಗೊಳ್ಳುತ್ತವೆ.

ಆದರೆ ಮನುವಿನ ಕಾಲಕ್ಕೆ ಬರುವ ವೇಳೆಗೆ ಹೆಣ್ಣಿನ ಸ್ಥಾನಮಾನವನ್ನು ಕುರಿತು ನಿರ್ದಿಷ್ಟ ಉಲ್ಲೇಖಗಳಾಗುತ್ತದೆ. ಅವುಗಳಲ್ಲಿ ಕೆಲವು ಹೀಗಿವೆ.

೧) ಹೆಣ್ಣನ್ನು ಬಾಲ್ಯದಲ್ಲಿ ತಂದೆಯು, ಯೌವ್ವನದಲ್ಲಿ ಗಂಡನೂ, ಮುಪ್ಪಿನಲ್ಲಿ ಮಗನೂ ಸಂರಕ್ಷಿಸಬೇಕು ಯಾವ ಕಾಲಕ್ಕೂ ಹೆಣ್ಣು ಸ್ವಾತಂತ್ರ್ಯಾರ್ಹಳಲ್ಲ.

೨) ಹೆಣ್ಣು ಸಮುದ್ರವನ್ನು ಸೇರುವ ನದಿಯ ಹಾಗೆ. ಅವಳು ಮದುವೆಯಲ್ಲಿ ತಾನು ಕೂಡುವ ಗಂಡನ ಗುಣಗಳನ್ನು ಪಡೆಯುತ್ತಾಳೆ.

೩) ತನ್ನ ಗಂಡನಿಂದ ಮಗುವನ್ನು ಪಡೆಯಲು ಅನರ್ಹಳಾದ ಹೆಣ್ಣು ತನ್ನ ಭಾವನಿಂದ (ಗಂಡನ ಅಣ್ಣ) ಮಗುವನ್ನು ಪಡೆಯಬಹುದು.

೪) ಯಾವುದೋ ಕೆಲಸದ ಮೇಲೆ ತನ್ನ ಹೆಂಡತಿಯಿಂದ ಬಹುಕಾಲ ದೂರವಿರುವ ಗಂಡನು ತನ್ನ ಹೆಂಡತಿಗೆ ಸಾಕಷ್ಟು ಊಟ—ಬಟ್ಟೆಗೆ ಏರ್ಪಾಡು ಮಾಡಬೇಕು ಇಲ್ಲದಿದ್ದಲ್ಲಿ ಹೆಣ್ಣು ತನ್ನ ಚಾರಿತ್ರ್ಯವನ್ನು ಕಳೆದುಕೊಳ್ಳುತ್ತಾಳೆ.

ವರ್ಣಾಶ್ರಮ ವ್ಯವಸ್ಥೆಯ ಹುಟ್ಟಿನಿಂದ ಹೆಣ್ಣಿನ ಸ್ಥಾನಮಾನದ ಮೇಲೆ ಅತೀ ಕೆಟ್ಟ ಪರಿಣಾಮಗಳು ಆದದ್ದನ್ನು ಗಮನಿಸಬಹುದು, ಅಲ್ಲದೆ ವರ್ಣಾಶ್ರಮದ ನಂತರವೇ ಹೆಣ್ಣಿನ ಸ್ಥಾನಮಾನ ಕ್ರಮಕ್ರಮೇಣ ಅಧೋಗತಿಗಿಳಿಯುತ್ತಾ ಹೋದದ್ದು ಸ್ಪಷ್ಟ ಕಂಡು ಬರುತ್ತದೆ. ವರ್ಣಾಶ್ರಮ ವ್ಯವಸ್ಥೆಯಲ್ಲಿ ಮೈಲಿಗೆಯ ಕಾರಣಕ್ಕೆ ಹೆಣ್ಣನ್ನು ಬಹುಪಾಲು ಶೂದ್ರರೊಟ್ಟಿಗೆ ಗುಂಪುಗೂಡಿಸಲಾಯಿತು. ಮುಟ್ಟು ಹೆರಿಗೆ ಮುಂತಾದ ದೈಹಿಕ ಕ್ರಿಯೆಗಳಷ್ಟೇ ಅಲ್ಲದೆ "ಶೀಲ"ವೇ ಮುಂತಾದ ಮೌಲ್ಯಸಂಬಂಧೀ ಅಂಶಗಳಿಂದಲೂ ಹೆಣ್ಣಿನ ಮೈಲಿಗೆಯನ್ನು ಹೇಳಲಾಯಿತು. ಬ್ರಾಹ್ಮಣ ಹೆಂಗಸೂ ಚಂಡಾಲಳಾಗುವ ಸಂದರ್ಭಗಳಿದ್ದವು. ಹೀಗೆ "ಮೈಲಿಗೆ" ಯಿಂದಾಗಿ ಶೂದ್ರರೊಟ್ಟಿಗೆ ಸ್ಥಾನವನ್ನು ಪಡೆದುಕೊಂಡ ಹೆಣ್ಣಿನ ಸುತ್ತಲೂ ಎಲ್ಲ ಬಗೆಯ ದಮನಕಾರೀ ಮೌಲ್ಯಗಳೂ ಧಾರಾಳವಾಗಿ ಹುಟ್ಟಿಕೊಂಡವು. ಈ ಶೂದ್ರರೊಟ್ಟಿಗೆ ಗುಂಪುಗೂಡಿಸುವಿಕೆ ಎಷ್ಟು ಸ್ಪಷ್ಟ ಆಯಾಮವನ್ನು ಪಡಕೊಂಡಿತೆಂದರೆ ಇಂದಿನ ಆಧುನಿಕ ಯುಗದಲ್ಲೂ "ಮಹಿಳೆಯರ ಪ್ರಶ್ನೆ" ಮತ್ತು "ಗಂಡಸರ ಪ್ರಶ್ನೆ" ಗಳ ಸ್ವರೂಪ ಅನೇಕ ಬಗೆಯಲ್ಲಿ ಸಮಾನಾಂತರವಾದವುಗಳಾಗಿರುವುದನ್ನು ಅನೇಕ ಸ್ತ್ರೀ ಮತ್ತು ಪುರುಷ ಚಿಂತಕರು ಪ್ರಸ್ತಾಪಿಸಿದ್ದಾರೆ. ಧಾರ್ಮಿಕ ಮತ್ತು ಸಾಂಸ್ಕೃತಿಕ ಅಶಕ್ತ ಸ್ಥಿತಿ ಇದು ಎಂದು ಗುರುತಿಸಿದ್ದಾರೆ. ಲೋಹಿಯಾರಂತ ರಾಜಕೀಯ ಮುತ್ಸದ್ಧಿ ಇದರ ರಾಜಕೀಯ ಆಯಾಮಗಳನ್ನು ಎತ್ತಿ ತೋರಿಸಿದ್ದಾರೆ. ಹೀಗಾಗಿ ಈ ನೆಲದಲ್ಲಿ ಜಾತಿ ವಿರುದ್ಧದ ಕೂಗು ಕೇಳಿ ಬಂದಾಗಲೆಲ್ಲಾ ಹೆಣ್ಣಿನ ದಮನದ ವಿರುದ್ಧವೂ ಒಂದಷ್ಟು ದನಿ ಕೇಳಿಬರುವುದನ್ನು ಗಮನಿಸಿಕೊಳ್ಳಬಹುದು. ಹನ್ನೆರಡನೇ ಶತಮಾನದಲ್ಲಿ ಕರ್ನಾಟಕದಲ್ಲಿ ತಲೆ ಎತ್ತಿದ ವೀರಶೈವ ಚಳುವಳಿ ಇದಕ್ಕೆ ಸಮರ್ಥ ಗ್ರಾಸ ಒದಗಿಸುತ್ತದೆ. ಈ ಇಡೀ ಚಳುವಳಿಯಲ್ಲಿ ಹಿಂದೆಂದೂ ಕಾಣದಂತಹ ರೀತಿಯಲ್ಲಿ ಮಹಿಳೆಯರ ಭಾಗವಹಿಸುವಿಕೆ ಕಂಡುಬರುತ್ತದೆ. ಮಹಿಳಾ ಚಿಂತಕಿಯರ, ಬರಹಗಾರ್ತಿಯರ ದಂಡೇ ಅಲ್ಲಿದೆ. ವಚನಗಳಲ್ಲಿ ಮಹಿಳೆಯರದ್ದೂ ಸಮಾನಪಾಲು. ಜಾತಿಯಾಧಾರಿತ ಸಮಾಜದ ಕೊಳೆತು ನಾರುವ ಮೌಲ್ಯಗಳನ್ನು ನೇರವಾಗಿ ಆಕ್ರಮಿಸುವ ಈ ಚಳುವಳಿಯಲ್ಲಿ ಪಾಲ್ಗೊಂಡ ಹೆಂಗಸರು ಮೊಟ್ಟ ಮೊದಲಿಗೆ ತಮ್ಮೆಡೆಗಿನ ದಮನಕಾರೀ ಮೌಲ್ಯಗಳನ್ನು ಆಕ್ರಮಿಸುತ್ತಾರೆ. ಮಹದೇವಿಯಕ್ಕ ತನ್ನ ಗುರಿಸಾಧನೆಯ ಹಾದಿಯಲ್ಲಿ ಬಂದ ಎಲ್ಲರನ್ನೂ, ಎಲ್ಲವನ್ನೂ ಗೆದ್ದು, ಕಟ್ಟುಪಾಡುಗಳ ಸುಳ್ಳುಪೊರೆಯನ್ನು ಕಿತ್ತೆಸೆದು ದಿಗಂಬರಳಾಗಿ ನಡೆಯುತ್ತಾಳೆ. ಕೊನೆಯಲ್ಲಿ ಅವಳು ಬಸವ, ಅಲ್ಲಮರೇ ಮುಂತಾದ ಧೀಮಂತರಿಂದ ತುಂಬಾ ಎತ್ತರ

---

## ದಾಖಲೆ ನಿರ್ಮಿಸಿದ ನಾರ್ಟಿನಾ

೩೩ ವರ್ಷದ ಮಾರ್ಟಿನಾ ವಿಂಬಲ್ಡನ್ ಮಹಿಳೆಯರ ಸಿಂಗಲ್ಸ್ ಫೈನಲ್‌ನಲ್ಲಿ ಜೀನಾ ಗ್ಯಾರಿಸನ್‌ರವರನ್ನು ಸೋಲಿಸಿ ೯ನೇ ಬಾರಿಗೆ ವಿಂಬಲ್ಡನ್ ಕಿರೀಟ ಧರಿಸಿದ್ದಾರೆ. ಈ ವಿಜಯದಿಂದಾಗಿ ಅವರು ಹೆಲೆನವಿಲ್ಸ್‌ಮೂಡಿ ಅವರ ಎಂಟು ವಿಜಯಗಳ ದಾಖಲೆಯನ್ನು ಮುರಿದಿದ್ದಾರೆ.

---

ದಲ್ಲಿ ಸ್ವೀಕೃತಗೊಳ್ಳುತ್ತಾಳೆ. ಅಲ್ಲಿಂದತ್ತಲಿಗೆ ಸಮಕಾಲೀನದವರೆಗೂ ದಮನಕ್ಕೊಳಗಾದ ಜಾತಿಗಳ ಪ್ರಶ್ನೆಯ ಜೊತೆ ಜೊತೆಗೇ ಮಹಿಳೆಯರ ಪ್ರಶ್ನೆಯೂ ಅವಿಭಾಜ್ಯಗೊಂಡಿರುವುದು ಚರಿತ್ರೆಯ ಸತ್ಯ. ಈ ಕುರಿತ ವಿಸ್ತಾರ ಚರ್ಚೆಯನ್ನು ಮತ್ತೊಮ್ಮೆ ಎತ್ತಿಕೊಳ್ಳಬಹುದು.

**ಅನುಕರಣೆಯ ಪಿಡುಗು:** ವರ್ಣಾಶ್ರಮದ ಹುಟ್ಟು, ಅಲ್ಲಿಂದತ್ತಲಿಗೆ ಹೆಂಗಸಿನ ಸ್ಥಾನಮಾನ ಕ್ರಮೇಣ ಕೆಳಗಿಳಿಯುತ್ತಾ ಹೋದದ್ದು, ಈ ಪ್ರಕ್ರಿಯೆಯಲ್ಲಿ ಹುಟ್ಟು ಹಾಕಲ್ಪಟ್ಟ ಮೌಲ್ಯಗಳು ಇತ್ಯಾದಿಗಳನ್ನು ಗಮನಿಸಿದಾಗ, ಈ ಪ್ರಕ್ರಿಯೆ ಸವರ್ಣೀಯ



ಹೆಂಗಸರ ಸಂಬಂಧದಲ್ಲಿ ನಡೆದಿರುವುದು ಸ್ಪಷ್ಟ ಆಗುತ್ತದೆ. ಇದರ ಸ್ಪಷ್ಟ ಸ್ವರೂಪಗಳು ಗ್ರಾಮೀಣ ಸಮಾಜದಲ್ಲಿ ಕಾಣ ಸಿಗುತ್ತವೆ. ಇವತ್ತಿಗೂ "ಯಶಸ್ವೀ", "ಆದರ್ಶ" ಹೆಣ್ಣಿನ ಕಲ್ಪನೆ ಸವರ್ಣೀಯ ಸಮಾಜಕ್ಕೆ ಅನ್ವಯವಾಗುವ ರೀತಿಯಲ್ಲಿ ಕೆಳಜಾತಿಗಳಿಗೆ ಅನ್ವಯಿಸದಿರುವುದು ವಾಸ್ತವ. ಆದರೆ ಕಾಲಾಂತರದಲ್ಲಿ "ಯಶಸ್ವೀ" ಗಳಾಗುವ ಕಾತರದಲ್ಲಿ ಸಂಸ್ಕೃತಿಯ ಪ್ರಮುಖ ಧಾರೆಯಲ್ಲಿ ಹೇಗಾದರೂ ತೂರಿಕೊಳ್ಳುವ ಪ್ರಯತ್ನದಲ್ಲಿ ಸವರ್ಣೀಯ ಸಮಾಜದ ಮೌಲ್ಯಗಳ ಅನುಕರಣೆ ಕೆಳಜಾತಿ ಹೆಂಗಸರಲ್ಲಿ ತುಂಬಾ ತೀವ್ರವಾಗಿ ನಡೆದಿರುವುದು, ನಡೆಯುತ್ತಿರುವುದು ಸ್ಪಷ್ಟ. ಅದು ಎಷ್ಟೊಂದು ತೀವ್ರವಾಗಿ ನಡೆದಿದೆಯೆಂದರೆ ಈ ಎರಡೂ ಸಮಾಜಗಳ ಸ್ತ್ರೀ ಸಂಒಂದೇ ಮೌಲ್ಯಗಳಲ್ಲಿ ವ್ಯತ್ಯಾಸವೇ ಇಲ್ಲವೇನೋ ಎಂದು ಭ್ರಮಿಸುವಷ್ಟರ ಮಟ್ಟಿಗೆ! ಮುಂದಿನ ನಿದರ್ಶನಗಳಲ್ಲಿ ಇದನ್ನು ಗಮನಿಸಬಹುದು. ನಾನೊಮ್ಮೆ ಆನೇಕಲ್ಲಿನ ಹಳ್ಳಿಯೊಂದರಲ್ಲಿ ದಲಿತ ಹೆಂಗಸರ ಜತೆ ಹರಟುತ್ತಿದ್ದಾಗ ೬೦-೬೫ರ ಹರೆಯದ ಮುನಿಯಲ್ಲಮ್ಮನವರನ್ನು ಯಾವುದಾದರೂ ಹೆಣ್ಣು ಮಕ್ಕಳಿಗೆ ಅನ್ವಯಿಸುವ ಹಾಡನ್ನು ಹಾಡಿ ಎಂದು ಕೇಳಿದೆ. ಆಕೆ "ಎಲ್ಲಿ ಹೋಗುವೆ ತಂಗೀ, ಇಲ್ಲಿ ಬಾರಮ್ಮ ತಂಗೀ" ಎಂದು ಪ್ರಾರಂಭಿಸಿ "ಮತ್ತೇ ಗಂಡಾನ ಪಾದ ಪೂಜೆ ಮಾಡಮ್ಮ ತಂಗೀ ಪೂಜೆಯ ಮಾಡಿದರೆ ನಿನಗೆ ಮೋಕ್ಷ ಉಂಟಮ್ಮ ತಂಗೀ......." ಹೀಗೆ ಮುಂದುವರೆಸಿದರು. ವಾಸ್ತವದಲ್ಲಿ ಮುನಿಯಲ್ಲಮ್ಮನವರು ತಮ್ಮ ಕುಡುಕ ಗಂಡನನ್ನ ನಿಭಾಯಿಸುವಲ್ಲಿ ಆತನ ಮೇಲೆ ಸರ್ವೇ ಸಾಮಾನ್ಯವಾಗಿ ಕೈ ಮಾಡುವುದುಂಟು. ಆದರೆ ಗಂಡನ ಪಾದ ಪೂಜೆ ಮಾಡುವುದು ಮಾತ್ರ ಆದರ್ಶದ ಕಲ್ಪನೆ. ಆರ್ಥಿಕವಾಗಿ ಒಂದಷ್ಟು ಮುಂದಿರುವ ಕೆಳಜಾತಿ ಕುಟುಂಬಗಳಲ್ಲಂತೂ ಸವರ್ಣೀಯ ಸಮಾಜದ "ಅಮ್ಮ" ನವರುಗಳ "ಆದರ್ಶ ಹೆಣ್ಣಿನ" ಮೌಲ್ಯಗಳನ್ನು ಪಾಲಿಸುವ ಶತಪ್ರಯತ್ನ ನಡೆದಿರುತ್ತದೆ. ಈ ಉದಾಹರಣೆಯನ್ನು ನೋಡೋಣ. ಹಿಂದೊಮ್ಮೆ ಮಳವಳ್ಳಿಯ ಹಳ್ಳಿಯೊಂದರಲ್ಲಿದ್ದೆ. ಅದು ಸಂಪೂರ್ಣ ಹರಿಜನ ಹಳ್ಳಿ. ಅರ್ಧ, ಒಂದು, ಎರಡು ಎಕರೆ ಒಣ ಭೂಮಿಯನ್ನ ಹೊಂದಿರುವ ಹರಿಜನ ಕುಟುಂಬಗಳವು. ಇಡೀ ಹಳ್ಳಿಯಲ್ಲಿ ಒಂದು ಕುಟುಂಬ ಮಾತ್ರ ೨೦ ಎಕರೆ ಭೂಮಿ ಪಡೆದಿದ್ದು ನೀರಾವರಿಯೇ ಅಲ್ಲದೆ ಎಲ್ಲಾ ಬಗೆಯ ಆಧುನಿಕ ಸೌಲಭ್ಯಗಳನ್ನು ಹೊಂದಿತ್ತು! ವಾಸ್ತವವೆಂದರೆ ಇಡೀ ಹಳ್ಳಿಗೆ ಈ ಕುಟುಂಬ ಸವರ್ಣೀಯರ ಕುಟುಂಬ ಇದ್ದಂತೆ. ಈ ಕುಟುಂಬದ ಮುಟ್ಟಾದ ಹೆಣ್ಣುಮಕ್ಕಳು ಹೊರಗೆ ಹೋಗುವುದಿಲ್ಲ. ಈ ಕುಟುಂಬದ ಹೆಂಗಸರು ತಮ್ಮ ಹೊಲದಲ್ಲೇ ಕೆಲಸ ಮಾಡುವುದಿಲ್ಲ. ಊರ ಸಂತೆಯನ್ನು ಆ ಮನೆಯ ಹೆಂಗಸರು ನೋಡಿಲ್ಲ ಎಂಬುದು ಉತ್ಪ್ರೇಕ್ಷೆಯ ಮಾತಲ್ಲ. "ನಮಗೆ ತಿನ್ನುಣ್ಣಲು ದೇವರು ಕೊಟ್ಟಿರುವಾಗ ನಮ್ಮ ಮನೆಯ ಹೆಂಗಸರು ಏಕೆ ಹೊಸ್ತಿಲು ದಾಟಬೇಕು? ಹೆಂಗಸರು ಯಾವಾಗಲೂ ಹೊಸ್ತಿಲ ಒಳಗೆ ಇರುವುದೇ ಮರ್ಯಾದೆ" ಎಂದರು ಮನೆಯ ಯಜಮಾನರು. ಹೀಗಾಗುವುದರಿಂದ ಆಸ್ತಿಯೇ ಇರದಂತಹ ಅನಿವಾರ್ಯ ಸ್ಥಿತಿಯಲ್ಲಿ ಆಸ್ತಿಯ

ಕಲ್ಪನೆ ಇಲ್ಲದಿರುವುದು, ದುಡಿತ ಅನಿವಾರ್ಯವೇ ಆದ್ದರಿಂದ ದುಡಿತಕ್ಕೆ ಹೋಗಿ ಒಂದಷ್ಟು ಗಳಿಸಿ ತರುವುದು, ತುಂಬಾ ಎಡುಕ ಗಂಡನನ್ನ ನಿಭಾಯಿಸಲೇ ಬೇಕಾದಾಗ ಆತನ ಮೂತಿಗೆ ತಿರುಗಿಸಿ ನಾಲ್ಕು ಬಿಗಿಯುವುದು. ಇಂತಹ ಆನಿವಾರ್ಯ ಸ್ಥಿತಿಗಳನ್ನು ಕೆಳಜಾತಿ ಹೆಂಗಸರಲ್ಲಿನ ಶಕ್ತಿ ಎಂದು ಭಾವಿಸಬೇಕೇ ಎಂದು ಪ್ರಶ್ನಿಸಿಕೊಳ್ಳಬೇಕಾಗುತ್ತದೆ. ಇಲ್ಲಿನ ಇನ್ನೊಂದು ಸತ್ಯವೆಂದರೆ ಮೇಲ್ಜಾತಿಯ ಹೆಂಗಸರು ಬರೀ ಹೆಣ್ಣೆಂಬ ಕಾರಣಕ್ಕೆ

ಮೇಲ್ಜಾತಿಯ ಹೆಂಗಸರು ಬರೀ ಹೆಣ್ಣೆಂಬ ಕಾರಣಕ್ಕೆ ಶೋಶಣೆಗೆ ಒಳಗಾಗಿದ್ದರೆ, ಕೆಳಜಾತಿಯಲ್ಲಿನ ಹೆಂಗಸು ಜಾತಿ ವರ್ಗ ಮತ್ತು ಹೆಣ್ಣು ಎಂಬ ಮೂರು ಸ್ತರಗಳಲ್ಲಿ ತುಳಿತಕ್ಕೆ ಒಳಗಾಗಿರುತ್ತಾಳೆ. (ಗ್ರಾಮೀಣ ಸಮಾಜದಲ್ಲಿ ಅಂತ್ಯಂತ ಕೆಳಜಾತಿ ಕೆಳವರ್ಗವೂ ಆಗಿರುವುದು ವ್ಯವಸ್ಥೆಯ ಸತ್ಯ) ಅವರನ್ನು "ಗುಲಾಮರ ಗುಲಾಮರು" ಎಂದು ಹೇಳಬೇಕಾಗುತ್ತದೆ.

ಶೋಷಣೆಗೆ ಒಳಗಾಗಿದ್ದರೆ, ಕೆಳಜಾತಿಯಲ್ಲಿನ ಹೆಂಗಸು ಜಾತಿ. ವರ್ಗ ಮತ್ತು ಹೆಣ್ಣು ಎಂಬ ಮೂರು ಸ್ತರಗಳಲ್ಲಿ ತಳಿತಕ್ಕೆ ಒಳಗಾಗಿರುತ್ತಾಳೆ.(ಗ್ರಾಮೀಣ ಸಮಾಜದಲ್ಲಿ ಅತ್ಯಂತ ಕೆಳಜಾತಿ ಅತ್ಯಂತ ಕೆಳವರ್ಗವೂ ಆಗಿರುವುದು ವ್ಯವಸ್ಥೆಯ ಸತ್ಯ) ಅವರನ್ನು "ಗುಲಾಮರ ಗುಲಾಮರು" ಎಂದು ಹೇಳಬೇಕಾಗುತ್ತದೆ, ಶೇ.೯೪ ಅಸಂಘಟಿತ ಕ್ಷೇತ್ರದಲ್ಲಿರುವ ಇಲ್ಲಿನ ದುಡಿಯುವ ಮಹಿಳೆಯರ ಕೆಟ್ಟ ಶೋಷಣೆಯನ್ನು ಕುರಿತು ಬೇರೆಯೇ ಚರ್ಚೆಯನ್ನು ಎತ್ತಿಕೊಳ್ಳಬೇಕಾಗುತ್ತದೆ.

**ಸಾಂಕೇತಿಕ ಸತ್ಯಗಳು :** ಹಾಗಾದರೆ ಕೆಳಜಾತಿ ಸಂಸ್ಕೃತಿ | ಗಿರಿಜನ ಸಂಸ್ಕೃತಿ ಅತ್ಯಂತ ಶಕ್ತ ಸಂಸ್ಕೃತಿ, ಅದು ಸ್ತ್ರೀಪರ ಸಂಸ್ಕೃತಿ ಎಂಬೆಲ್ಲಾ ವಾದಗಳಲ್ಲಿ ಏನಾದರೂ ಹುರುಳಿದೆಯೇ ಎಂದು ನೋಡಬೇಕಾಗುತ್ತದೆ. ಇಲ್ಲಿ ಕೆಲವು ಸಾಂಕೇತಿಕ ಸತ್ಯಗಳು ಸಹಾಯಕ್ಕೆ ಬರುತ್ತವೆ. ಹಿಂದೊಮ್ಮೆ ಗ್ರಾಮೀಣ ಕಾರ್ಯಕರ್ತೆಯ | ಕಾರ್ಯಕರ್ತರ ಜತೆ ಶಿಬಿರವೊಂದರಲ್ಲಿದ್ದಾಗ ಯಾವುದೋ ವಿಷಯವೊಂದರ ಚರ್ಚೆಯ ಸಂದರ್ಭದಲ್ಲಿ ಕೆಳಜಾತಿ ಮತ್ತು ಮೇಲ್ಜಾತಿಗಳು ಪೂಜಿಸುವ ದೇವತೆಗಳ ಪಟ್ಟಿ ಮಾಡಿದೆವು, ಮೇಲ್ಜಾತಿಯ ಪಟ್ಟಿಯಲ್ಲಿ ಬಂದ ದೇವತೆಗಳು: ಸತ್ಯನಾರಾಯಣ, ವಿಷ್ಣು, ಕೃಷ್ಣ, ಮಂಜುನಾಥ ಗಣೇಶ, ನರಸಿಂಹ, ಲಕ್ಷ್ಮಿ, ಸರಸ್ವತಿ ಹೀಗೆ ಕೆಳಜಾತಿಯ ಪಟ್ಟಿಯಲ್ಲಿ ಬಂದವು. ಮಾರಮ್ಮ, ಗುತ್ಯಮ್ಮ, ದುರ್ಗಮ್ಮ, ಓಒಳಮ್ಮ, ರೇಣುಕಮ್ಮ, ಎಲ್ಲಮ್ಮ, ಬಿದಿರಮ್ಮ, ಪಟಾಲಮ್ಮ, ಭೂತಪ್ಪ........ ಹೀಗೆ ಕೆಳಜಾತಿಗಳಲ್ಲಿ ಸ್ತ್ರೀದೇವತೆಗಳಿಗೆ ಅಗ್ರಪೂಜೆ ಇರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಶೈವ ಧರ್ಮದ ಶಿವಾ–ಶಕ್ತಿಯ ಪರಿಕಲ್ಪನೆ ಇಲ್ಲಿನ ಸಮಾಜದ ಗಂಡು ಹೆಣ್ಣಿನ ಸಂಬಂಧದಲ್ಲಿ ಹೆಚ್ಚು ಪ್ರಚಲಿತವಾಗಿದ್ದರೆ ವೈಷ್ಣವ ಧರ್ಮ ಹೇಳುವ "ಜೀವಾತ್ಮ ಪರಮಾತ್ಮ" ಸಂಬಂಧದ ಕಲ್ಪನೆ ಸವರ್ಣೀಯ ಸಮಾಜದಲ್ಲಿ ಹಾಸುಹೊಕ್ಕು ಪಡೆದಿರುವುದು ಗಮನ ಸೆಳೆಯುತ್ತದೆ. ಒಟ್ಟಿನಲ್ಲಿ ಕೆಳಜಾತಿ ಹೆಂಗಸರಲ್ಲಿ ಮುಕ್ತತೆ ಶಕ್ಯತೆ ಸ್ವಾತಂತ್ರ್ಯ ಸಮಾನತೆಯ ಅಂಶಗಳು ಸಾಂಸ್ಕೃತಿಕವಾಗಿ ಮೈಗೂಡಿಕೊಂಡಿರುವುದು ಬಂದು ಕಡೆಯಾದರೆ ಶ್ರಮ ಬದುಕಿನ ಅನಿವಾರ್ಯತೆಗಳೂ ಇವಕ್ಕೆ ಪೂರಕವಾಗಿರುವುದನ್ನೂ ಅಲ್ಲಗಳೆಯುವಂತಿಲ್ಲ.

**ಮೌಲ್ಯ ವೈರುಧ್ಯಗಳು :** ಕೆಲವು ಆಚರಣೆಗಳಲ್ಲಿ ಸಂಪ್ರದಾಯಗಳಲ್ಲಿ ಮತ್ತು ನಂಬಿಕೆಗಳಲ್ಲಿ ಕೆಳಜಾತಿ ಮೇಲ್ಜಾತಿ ಹೆಂಗಸಲ್ಲಿ ಸ್ಪಷ್ಟ, ವೈರುಧ್ಯಗಳೇ ಇವೆ.

ಕೆಲವು ಆಚರಗಳಲ್ಲಿ, ಸಂಪ್ರದಾಯಗಳಲ್ಲಿ ಮತ್ತು ನಂಬಿಕೆಳಲ್ಲಿ ಕೆಳಜಾತಿ, ಮೇಲ್ಜಾತಿ ಹೆಂಗಸರಲ್ಲಿ ಸ್ಪಷ್ಟ ವೈರುಧ್ಯಗಳೇ ಇವೆ. ಉದಾ: ಕಪ್ಪು ಬಳೆ ಕೆಳಜಾತಿ ಹೆಂಗಸರಿಗೆ ಶುಭ ಸಂಕೇತ. ಅದು ಅವರಿಗೆ ಮಂಗಳಕರ. ಇಲ್ಲಿನ ಎಲ್ಲಾ ಮುತ್ತೈದೆಯರ ಕೈಲಿ ಕರಿಬಳೆ ಮಿನುಗುವುದನ್ನು ಇವತ್ತಿಗೂ ನೋಡಬಹುದು. ಆದರೆ ಮೇಲ್ಜಾತಿ ಹೆಂಗಸರಿಗೆ ಇದು ಅಶುಭ ಸಂಕೇತ. ಬಾಣಂತಿಯರು ದೆವ್ವ ಭೂತಗಳಂತ ದುಷ್ಟ ಶಕ್ತಿಗಳಿಂದ ರಕ್ಷಣೆ ಪಡೆಯಲು ಹನ್ನೊಂದು ದಿನಗಳವರೆಗೆ (ಮೈಲಿಗೆಯಲ್ಲಿರುವಾಗ)ಕಪ್ಪು ಬಳೆ ತೊಡುವುದುಂಟು. ಒಮ್ಮೆ ಅವರು ಶುದ್ಧಿಗೊಂಡರೆಂದರೆ ಕಪ್ಪು ಬಳೆ ವರ್ಜ್ಯ.

ಉದಾ: ಕಪ್ಪು ಬಳೆ ಕೆಳಜಾತಿ ಹೆಂಗಸರಿಗೆ ಶುಭ ಸಂಕೇತ. ಅದು ಅವರಿಗೆ ಮಂಗಳಕರ ಇಲ್ಲಿನ ಎಲ್ಲಾ ಮುತ್ತೈದೆಯರ ಕೈಲಿ ಕರಿಬಳೆ ಮಿನುಗುವುದನ್ನೂ ಇವತ್ತಿಗೂ ನೋಡಬಹುದು. ಆದರೆ ಮೇಲ್ಜಾತಿ ಹೆಂಗಸರಿಗೆ ಇದು ಅಶುಭ ಸಂಕೇತ, ಬಾಣಂತಿಯರು ದೆವ್ವ

ಭೂತಗಳಂಥ ದುಷ್ಟಶಕ್ತಿಗಳಿಂದ ರಕ್ಷಣೆ ಪಡೆಯಲು ಹನ್ನೊಂದು ದಿನಗಳವರೆಗೆ (ಮೈಲಿಗೆಯಲ್ಲಿರುವಾಗ) ಕಪ್ಪು ಬಳೆ ತೊಡುವುದುಂಟು ಒಮ್ಮೆ ಅವರು ಶುದ್ಧಿಗೊಂಡರೆಂದರೆ ಕಪ್ಪು ಬಳೆ ವರ್ಜ್ಯ! ಹಾಗೆಯೇ ಚೆಂಡು ಹೂವು ಇದು ಸವರ್ಣೀಯ ಸಮಾಜದ ಹೆಂಗಸರಿಗೆ ವರ್ಜ್ಯ, ಆದರೆ ಕೆಳಜಾತಿ ಹೆಂಗಸರಿಗೆ ಚೆಂಡು ಹೂವೆಂದರೆ ಎಲ್ಲಿಲ್ಲದ ಸಂಭ್ರಮ! ಅವರು ಸಂತೆಗೆ ಹೊರಡಬೇಕಾದರೆ ಹಿತ್ತಲಿನ ಚೆಂಡು ಹೂವಿಗೆ ಮೋಕ್ಷ ಎಂದೆ ಅರ್ಥ "ಅವಕ್ಕೇನು ಚಳ್ಳೆಣ್ಣೆ ಚಟ್ಕ್ಯಂಡು ಚೆಂಡೂವು ಮುಡ್ಕ್ಯಂಡು ಹೊರಟ್ವು ಅಂದ್ರೆ........" ಹೀಗೆ ನಮ್ಮ ಹಳ್ಳಿಯಲ್ಲಿನ "ಅಮ್ಮನವರುಗಳು" ಶೂದ್ರ ಹೆಂಗಸರನ್ನು ಕೀಳುಮಾಡಿ ಮಾತನಾಡುತ್ತಿದ್ದದ್ದು ನನಗೆ ಚೆನ್ನಾಗಿ ನೆನಪಿದೆ. ಹಾಗೆಯೇ ಹಾಡುವ ಹಾಡುಗಳು ಇವರು ಹಾಡುವ ಹಾಡಿನ ನಾದ-ಲಯಗಳಲ್ಲೇ ಸವರ್ಣೀಯತ್ವ ಶೂದ್ರತ್ವಗಳ ಸೊಗಡು ತುಂಬಿಕೊಂಡಿರುತ್ತದೆ.

ಕೆಳಜಾತಿ | ಗಿರಿಜನ ಸಮಾಜಗಳಲ್ಲಿ ಸಮುದಾಯದ ಗಂಡಸರು–ಹೆಂಗಸರು ಒಟ್ಟೊಟ್ಟಾಗಿ ಹಾಡು, ಕುಣಿತಗಳಲ್ಲಿ ಭಾಗವಹಿಸುವುದು ಕಾಣಸಿಗುತ್ತದೆ.

ಇನ್ನೂ ಸ್ಪಷ್ಟ ಸಂಕೇತಗಳಲ್ಲಿ ದಕ್ಕದೆ ಅವ್ಯಕ್ತವಾಗಿಯೇ ಪ್ರಕಟಗೊಳ್ಳುವ ಅಂಶಗಳು ಅಸಂಖ್ಯಾತವೆ! ನೀವೊಮ್ಮೆ ಗ್ರಾಮೀಣ ಸಂತೆಯೊಂದಕ್ಕೆ ಹೋದಾಗ ಸುಮ್ಮನೆ ಅಲ್ಲಿನ ಹೆಂಗಸರನ್ನು ಗಮನಿಸಿ ನೋಡಿ. ನೀವು ಶುದ್ಧ ಗ್ರಾಮ್ಯ ಬದುಕಿನ ಕಲ್ಪನೆ ಇರುವವರಾದರೆ ನಿಮಗೆ ಅಲ್ಲಿ ಬೆರಳೆಣಿಕೆಯಷ್ಟು ಸವರ್ಣೀಯ ಹೆಂಗಸರನ್ನು ಗುರುತಿಸುವುದೂ ಕಷ್ಟಸಾಧ್ಯವಾಗುತ್ತದೆ. ಅದಕ್ಕೆ ವಿರುದ್ಧವಾಗಿ ಕೆಳಜಾತಿ ಹೆಂಗಸರ ದಂಡು-ದಂಡೇ ಅಲ್ಲಿರುವುದನ್ನು ಕಾಣುವಿರಿ. ದಿನಸಿಯಿಂದ ಬಟ್ಟೆಯವರೆಗೂ ತಮಗೆ ಬೇಕಾದ್ದನ್ನು ಕೊಂಡು, ಸ್ವಲ್ಪ ದುಡ್ಡು ಉಳಿಸಿ ಬಣ್ಣದ ಪಾನೀಯವನ್ನೋ, ಚೆಂಡು — ಬತ್ತಾಸು — ವಡೆ —

ಆಧುನಿಕ ಸ್ತ್ರೀವಾದದ ಜತೆ ಜತೆಗೇ ಹುಟ್ಟಿಕೊಂಡ ಸೃಜನಾತ್ಮಕ ಬರಹಗಳಲ್ಲಿ ಕೆಳಜಾತಿಯ ಹೆಂಗಸರು ಲೈಂಗಿಕವಾಗಿ ಹೆಚ್ಚು ಮುಕ್ತ, ಶಕ್ತ ಹೆಣ್ಣುಗಳೆಂಬ ಪ್ರತಿಮೆಗಳು ವಿಪುಲವಾಗಿ ಹುಟ್ಟಿಕೊಂಡವು. ಆಧುನಿಕ ಸ್ತ್ರೀವಾದದ ಪ್ರಾರಂಭಕ್ಕೆ ಹೆಚ್ಚು ಒತ್ತುಕೊಟ್ಟ, "ಲೈಂಗಿಕ ವಿಮೋಚನೆ" ಯ ಸಂಬಂಧದಲ್ಲಿ ಇದು ತುಂಬಾ ಪ್ರಸ್ತುತತೆ, ಪ್ರಾಮುಖ್ಯತೆ ಪಡಕೊಂಡಿದ್ದುಂಟು. ಕ್ರಮೇಣದಲ್ಲಿ "ಲೈಂಗಿಕ ವಿಮೋಚನೆ" ಯೆನ್ನುವುದೇ 'ಕ್ಲೀಷೆ' ಯಂತಾಗತೊಡಗಿದಾಗ ಈ ಸಂಬಂಧದ ಕೆಳಜಾತಿ ಹೆಂಗಸರಲ್ಲಿನ ವಿಮೋಚನಾ ಅಂಶಗಳೂ ಕ್ಲೀಷೆಯೆನ್ನುವಂತಾಯಿತು. ಆದರೆ ಕೆಳಜಾತಿ ಸಂಸ್ಕೃತಿಯಲ್ಲಿನ ಸ್ತ್ರೀ ಪರ ಮೌಲ್ಯಗಳನ್ನು ಬರೀ ಲೈಂಗಿಕತೆಗೆ ತಳುಕುಹಾಕಿ ಆ ನಿಟ್ಟಿನಲ್ಲಿ ಹೇರಳವಾಗಿ ಬಳಸಿಕೊಂಡಿದ್ದರಿಂದ ಹೀಗಾಯಿತೆಂದು ನಂಬಬಹುದು.

ಸಾಂಪ್ರದಾಯಿಕ ಸವರ್ಣೀಯ ಸಮಾಜದಲ್ಲಿ ಗಂಡನನ್ನ "ನಮ್ಮನೆ ದೇವ್ರು" "ನಮ್ಮನೆ ಯಜಮಾನ್ರು ಎಂಬರ್ಥದ ಪದಗಳಿಂದ ಸಂಬೋಧಿಸಿದರೆ ಕೆಳಜಾತಿಗಳಲ್ಲಿ ಸಾಮಾನ್ಯವಾಗಿ ಗಂಡನನ್ನ ಏಕವಚನದಲ್ಲಿ "ಅದು,ಅವ" ನಮ್ಮನಿ ಹೋದ್ರೆ" ಹೀಗೆ ಸಂಬೋಧಿಸುವುದುಂಟು. ಕೂಡಿಕೆಯ ಪದ್ಧತಿ ಕೆಳಜಾತಿಗಳಲ್ಲಿ, ಗಿರಿಜನನ ಸಮಾಜಗಳಲ್ಲಿ ಇಂದಿಗೂ ಪ್ರಚಲಿತದಲ್ಲಿಂಟು. ಕೂಡಿಕೆಯೆಂದರೆ ಗಂಡ ಸತ್ತ ಅಥವಾ ಗಂಡಬಿಟ್ಟ ಹೆಂಗಸು ಇನ್ನೊಬ್ಬ ಗಂಡಸಿನೊಟ್ಟಿಗೆ ಸಂಸಾರಿಯಾಗುವುದು. ಕೂಡಿಕೆ ಮೇಲ್ಜಾತಿಗಳಲ್ಲಿ ಊಹೆಗೂ ನಿಲುಕದಂತಹದ್ದು. ಇದಲ್ಲದೆ ಇಂದಿಗೂ

ಬೋಂಡಾಗಳನ್ನೋ ತಿಂದು ಒಂದಷ್ಟು ಹೊತ್ತು ಒಟ್ಟೊಟ್ಟಿಗೆ ಮರದ ತಂಪಿನಲ್ಲಿ ಕೂತು ಹರಟಿ, ಬಿಸಿಲು ತಗ್ಗಲು ಮನೆ ಕಡೆ ಹೊರಡುತ್ತಾರೆ.

ಕೆಳಜಾತಿ ಹೆಂಗಸರಲ್ಲಿ ಮುಕ್ತತೆ, ಸ್ವಾತಂತ್ರ್ಯ, ಸಮಾನತೆಯ ಅಂಶಗಳು ಸಾಂಸ್ಕೃತಿಕವಾಗಿ ಮೈಗೂಡಿಸಿಕೊಂಡಿರುವುದು ಒಂದು ಕಡೆಯಾದರೆ ಶ್ರಮಬದುಕಿನ ಅನಿವಾರ್ಯತೆಯಿಂದಲೂ ಅವು ಬಂದಿವೆ ಎಂದು ಹೇಳಬಹುದು: ಒಟ್ಟಿನಲ್ಲಿ ಮೇಲ್ಜಾತಿ ಮತ್ತು ಕೆಳಜಾತಿಯ ಎರಡು ಭಿನ್ನ "ಎಂಟಿಟಿ" ಗಳೆಂದು ಹೇಳಬಹುದು!

ಲೈಂಗಿಕ ವಿಮೋಚನೆಯ ಸುತ್ತ: ಆಧುನಿಕ ಸ್ತ್ರೀವಾದದ ಜತೆ ಜತೆಗೇ ಹುಟ್ಟಿಕೊಂಡ ಸೃಜನಾತ್ಮಕ ಬರಹಗಳಲ್ಲಿ ಕೆಳಜಾತಿಯ ಹೆಂಗಸರು ಲೈಂಗಿಕವಾಗಿ ಹೆಚ್ಚು ಮುಕ್ತ, ಶಕ್ತ್ಯ, ಹೆಣ್ಣುಗಳೆಂಬ ಪ್ರತಿಮೆಗಳು ವಿಪುಲವಾಗಿ ಹುಟ್ಟಿಕೊಂಡವು. ಆಧುನಿಕ ಸ್ತ್ರೀವಾದ ಪ್ರಾರಂಭಕ್ಕೆ ಹೆಚ್ಚು ಒತ್ತುಕೊಟ್ಟ "ಲೈಂಗಿಕ ವಿಮೋಚನೆ"ಯ ಸಂಬಂಧದಲ್ಲಿ ಇದು ತುಂಬಾ ಪ್ರಸ್ತುತತೆ, ಪ್ರಾಮುಖ್ಯತೆ ಪಡಕೊಂಡದ್ದುಂಟು. ಕ್ರಮೇಣದಲ್ಲಿ "ಲೈಂಗಿಕವಿಮೋಚನೆ" ಯೆನ್ನುವುದೇ "ಕ್ಲೀಷೆ" ಯಂತಾಗತೊಡಗಿದಾಗ ಈ ಸಂಬಂಧದ ಕೆಳಜಾತಿ ಹೆಂಗಸರಲ್ಲಿನ ವಿಮೋಚನಾ ಅಂಶಗಳೂ ಕ್ಲೀಷೆಯೆನ್ನುವಂತಾಯಿತು. ಆದರೆ ಕೆಳಜಾತಿ ಸಂಸ್ಕೃತಿಯಲ್ಲಿನ ಸ್ತ್ರೀಪರ ಮೌಲ್ಯಗಳನ್ನು ಬರೀ ಲೈಂಗಿಕತೆತೆಗೆ ತಳುಕುಹಾಕಿ ಆ ನಿಟ್ಟಿನಲ್ಲೆ ಹೇರಳವಾಗಿ ಬಳಸಿಕೊಂಡದ್ದರಿಂದ ಹೀಗಾಯಿತೆಂದು ನಂಬಬಹುದು. ಉದಾಹರಣೆಗೆ:- ಮಂಡಿಯ ಮೇಲಕ್ಕೆ ಸಣ್ಣ ಕಚ್ಚೆಯನ್ನು ಬಿಗಿದು ಕಟ್ಟಿ, ತುಂಡು ಸೆರಗನ್ನು ತುಂಬಿದೆದೆಯ ಮೇಲೆ ಸುಮ್ಮನೆ ಹೊದ್ದು, ತಲೆ ಮೇಲೆ ಹಾಲು ಮೊಸರಿನ ಗಡಿಗೆಗಳನ್ನು ಹೊತ್ತು ದಾಂಡೇಲಿಯ ಬೀದಿಗಳಲ್ಲಿ ನಿರ್ಭಿಡೆಯಿಂದ ನಡೆಯುವ ಗೌಳಿಗರ ಹೆಂಗಸರನ್ನು ಗೌಳಿಗ ಸಮುದಾಯದ ಗಂಡಸರು ಎಂದೂ ತಮ್ಮ ಲೈಂಗಿಕತೆಗೆ ಸುಲಭದಲ್ಲಿ ಸಿಗುವವರೆಂದು ಭಾವಿಸಿಲ್ಲ. ಅವರನ್ನು ಬೇರೆ ಯಾವುದೇ ಸಮುದಾಯದ ಹೆಣ್ಣುಗಳಿಗಿಂತ ಹೆಚ್ಚಾಗಿ ಅವರು ಗೌರವಿಸಬಲ್ಲರು. ಆದ್ದರಿಂದ ಕೆಳಜಾತಿ | ಗಿರಿಜನ ಹೆಂಗಸರಲ್ಲಿನ ಉಲ್ಲಸಿತ ಬದುಕಿನ ಆರೋಗ್ಯಕರ ಮೌಲ್ಯಗಳಿಗೆ ಲೈಂಗಿಕತೆಯ ಹಣೆಪಟ್ಟಿ ಕೊಟ್ಟು ತಮ್ಮನುಕೂಲಕ್ಕೆ ಬಳಸಿಕೊಂಡದ್ದು ಮಧ್ಯಮವರ್ಗದ ಚಾಲೂಕಿತತನ ಎಂದು ಹೇಳಬೇಕಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಕೆಳಜಾತಿ | ಗಿರಿಜನ ಸ್ತ್ರೀ ಸಮುದಾಯದಲ್ಲಿ ಇಂದಿನ ಮಹಿಳಾ ಚಳವಳಿಗೆ ತುಂಬಾ ಪ್ರಸ್ತುತವೆನಿಸುತ್ತ ಕೊಡುಗೆ ನೀಡುವಂತಹ ಗಟ್ಟಿ ಮೌಲ್ಯಗಳಿರುವುದನ್ನು ತುಂಬಾ ಎಚ್ಚರಿಕೆಯಿಂದ, ಯಾವುದೇ ಪೂರ್ವಾಪರಗಳಿಗೆ ಒಳಗಾಗದೆ ನೋಡಬೇಕಾಗುತ್ತದೆ.

---

# ಶ್ರೀಮತಿ ಸರಿವೆ ಮಾಣಿಕ್ಯಮ್ಮ

78 ವರುಷದ ಶ್ರೀಮತಿ ಸರಿವೆ ಮಾಣಿಕ್ಯಮ್ಮನವರು ಕಲಾವಿದರ ಮನೆತನದವರು. ಅವರ ಪೂರ್ವಜರು ನೃತ್ಯ ಕಲಾವಿದರು. ಅನೇಕ ವರ್ಷಗಳ ಕಾಲ ದೇವಾಲಯದಲ್ಲಿ ನೃತ್ಯ ಮಾಡುತ್ತಿದ್ದರು. ಮಾಣಿಕ್ಯಮ್ಮನವರು ಪಶ್ಚಿಮ ಗೋದಾವರಿ ಜಿಲ್ಲೆಯ ಬಲ್ಲಿ ಪದುವಿನ ವೇಣುಗೋಪಾಲಸ್ವಾಮಿ ದೇವಸ್ಥಾನಕ್ಕೆ ಸೇರಿದವರಾಗಿದ್ದರು.

ಆಧ್ಯಾತ್ಮ ರಾಮಾಯಣದ ನೃತ್ಯ-ಅಭಿನಯ ರೂಪಕ ಬಲ್ಲ ಕಲಾವಿದೆ ಈಗ ಇವರೊಬ್ಬರೆ. ರಾಮ ಜನನದಿಂದ-ರಾವಣ ಸಂಹಾರದವರೆಗೂ ವಿಶೇಷತೆ ಪಡೆದಿದ್ದಾರೆ. ಪ್ರತಿದಿನವು ದೇವಸ್ಥಾನದಲ್ಲಿ ಇವರು ನೀಡುತ್ತಿದ್ದ ಕಾರ್ಯಕ್ರಮ ಒಂದು ವಿಶೇಷ ಆಚರಣೆಯಾಗಿತ್ತು. ಕಳೆದ 40 ವರುಷಗಳಿಂದ ಈ ಆಚರಣೆ ನಡೆಯುತ್ತಾ ಬಂದಿಲ್ಲ.

ಆಧ್ಯಾತ್ಮ ರಾಮಾಯಣವು 108 ಹಾಡುಗಳುಳ್ಳ ಶ್ರೇಷ್ಠ ಕಾವ್ಯ. ಸಂಗೀತಮಯವಾದ ಈ ಕಾವ್ಯವು ಭವ್ಯವಾಗಿದ್ದು ಗಾಯನಕ್ಕೆ ಸೊಗಸಾಗಿ ಹೊಂದಿಕೊಳ್ಳುತ್ತದೆ. ಈ ಕಾವ್ಯವನ್ನು 300 ವರುಷಗಳ ಹಿಂದೆ ತೆಲುಗಿನ ಕವಿ, ಗಾಯಕ ಶ್ರೀ ಮುನಿಪಲ್ಲಿ ಸುಬ್ರಮಣ್ಯನವರು ರಚಿಸಿದ್ದು.

ಶ್ರೀಮತಿ ಮಾಣಿಕ್ಯಮ್ಮನವರ ಅಭಿನಂದನಾ ಸಮಾರಂಭವನ್ನು ತನ್ಮಯಿ ಹಾಗೂ ಶ್ರೀನಿವಾಸ ಟ್ರಸ್ಟ್ (ಬೆಂಗಳೂರು) ನವರು 10-7-90 ರಂದು ಯುವನಿಕಾದಲ್ಲಿ ಏರ್ಪಡಿಸಿದ್ದರು

# ನೆಲೆ ಕಂಡ ಬದುಕು

ಸರಸ್ವತಿ ಧು.

ಅವಳ ಹೆಸರು "ಚನ್ನಮ್ಮ". "ಚನ್ನಾಗಿ" ಇದ್ದಳು, ಸ್ವಾಭಿಮಾನದಲ್ಲಿ ಕಿತ್ತೂರಿನ ಚನ್ನಮ್ಮನೆ! ಕಷ್ಟ ಸುಖ ಕೇಳಿದೊಡನೆಯೇ ದಳ ದಳ ಕಣ್ಣೀರು ಸುರಿಸುತ್ತಿದ್ದ ಅವಳು ಎದೆಯ ನೋವನ್ನೆಲ್ಲಾ ಕಣ್ಣೀರಿನಲ್ಲೇ ಹರಿಸಿಬಿಡುತ್ತಿದ್ದಳು. ಅವಳು ನಮ್ಮ ಮನೆ ಪಕ್ಕಕ್ಕೆ ಹಸು ಹಿಡಿದುಕೊಂಡು ಬಂದಾಗ, ಈಗಿರುವ ಸೊಳ್ಳೆಗಳ ಸಂತತಿ ಹೆಚ್ಚಿಸಲು ಬಂದಳೆಂದುಕೊಂಡೆ. ಬಂದವಳು ಒಬ್ಬಳಲ್ಲ. ಅವಳ ಜೊತೆಯಲ್ಲಿಯೇ ಅವಳ ಹಸು ಕಲ್ಯಾಣಿ. ಅಲ್ಲದೆ, ಅವಳ ಎರಡು ಮಕ್ಕಳು, ಅವಳ ಗಂಡನನ್ನೆ ಮದುವೆಯಾದ ಅವಳ ತಂಗಿ, ಅವಳ ಎರಡು ಮಕ್ಕಳು. ಇವರೆಲ್ಲರ "ಒಡೆಯ" ಅವ. ಜನದ ಸಂತೆ ಬಂದಂತಾಗಿತ್ತು. ಆ ಮನೆಗೆ ಎರಡು ಬಾಗಿಲುಗಳು. ಮಗ್ಗುಲಿನ ಬಾಗಿಲಿಗೆ ಇವಳು, ಎದುರು ಬಾಗಿಲಿಗೆ ಅವಳು. ಎರಡು ಬಾಗಿಲುಗಳೇ ಮನೆಯ ವಿಷಯವೇನೆಂದು ಬಟಾ ಬಯಲು ಮಾಡಿದ್ದವು.

ಸೆಗಣಿ, ಗಂಜಳದೊಂದಿಗೆ ಮಣ್ಣು ಸೇರಿ ನೆಲವೆಲ್ಲಾ ಕೊಚ್ಚೆಯಾಗಿತ್ತು. ಆ ವಾಸನೆಯೊಂದಿಗೆ ಅವಳ ಬದುಕಿನ ವಾಸನೆ ಅಡಗಿತ್ತು. ಎಲ್ಲರಂತೆ ಅವಳಿಗೂ ಮದುವೆಯಾಯ್ತು. ಮಕ್ಕಳಾಗಲಿಲ್ಲ, ಅಪ್ಪ ಅಮ್ಮ ತಂಗಿಯನ್ನೆ ಅವಳ ಗಂಡನಿಗೆ ಮದುವೆ ಮಾಡಿದರು. ಮುಂದೆ ಇಬ್ಬರಿಗೂ ಮಕ್ಕಳು. ಸಂತತಿಯೊಂದಿಗೆ ವೈಮನಸ್ಯಗಳು ಬೆಳೆದು ಮನೆಯೊಳಗೆ ಇಬ್ಬರೂ ಸೀಳಿ ಬೇರಾದರು. ಗಂಡನ ಪ್ರಾಮುಖ್ಯತೆ ಪಡೆದ ತಂಗಿಯ ಬದುಕು ದುಸ್ತರವಾಗಲಿಲ್ಲ. ಅಸಡ್ಡೆಗೊಳಗಾದವಳಿಗೆ ಬದುಕು ಕತ್ತಲಾಯಿತು. ಕತ್ತಲು ಸರಿಸಲು ಅವಳಲ್ಲಿ ಸ್ವಾಭಿಮಾನದ ಬೆಳಕಿತ್ತು. ಜೊತೆಗೆ ಸ್ನೇಹ ಜೀವಿ. ಪರಿಚಯವಾದ ಕೆಲವೇ ದಿನಗಳಲ್ಲಿ ಆತ್ಮೀಯಳಾಗುತ್ತಿದ್ದಳು. ತವರಿನಿಂದ ಸ್ವಲ್ಪ ಹಣ ಪಡೆದು, ಸ್ನೇಹಿತರೊಬ್ಬರ ಸಹಾಯದಿಂದ ಒಂದು ಹಸು ತಂದಳು. "ಕಲ್ಯಾಣಿ" ಎಂದು ಹೆಸರಿಟ್ಟಳು. ಕಷ್ಟಪಟ್ಟು, ಮಕ್ಕಳ ಸಹಾಯದೊಂದಿಗೆ ಅವಳ ಕಲ್ಯಾಣಿಗೊಂದು ಬೆಚ್ಚಗಿನ ಶೆಡ್ಡನ್ನು ನಿರ್ಮಿಸಿಬಿಟ್ಟಳು. ಸ್ನೇಹಿತರೆಲ್ಲರನ್ನು ಕೇಳಿಕೊಂಡು ತನ್ನ ಹಸುವಿನ ಹಾಲಿಗೆ ಗಿರಾಕಿಗಳನ್ನು ಪಡೆದು ಕೊಂಡಳು. ಸಗಣಿ ಮುಟ್ಟದವಳು, ಹಾಲುಕರೆಯಲು ಬಾರದವಳು ಹಸುವಿನ ಒಡತಿಯಾಗಿ, ಹಾಲು ಮಾರುವವಳಾದಳ. ಒಮ್ಮೆಯೂ ಹಾಲಿಗೆ ನೀರು ಬೆರೆಸುತ್ತಿರಲಿಲ್ಲ. ಮುಂಜಾನೆ ೫ ಕ್ಕೆ ಎದ್ದು ಕಲ್ಯಾಣಿ ಹಣೆಗೊಂದು ಕುಂಕುಮವಿಟ್ಟು ನಮಿಸಿ ಹಾಲು ಕರೆದು ೬ ರ ವೇಳೆಗೆ ಮಕ್ಕಳೊಂದಿಗೆ ಎಲ್ಲರಿಗೂ ಹಾಲು ತಲುಪಿಸಿ ಬಿಡುತ್ತಿದ್ದಳು. ಹಣಕಾಸಿನಲ್ಲೂ ಅಚ್ಚುಕಟ್ಟು. ತರಲೆ ತಾಪತ್ರಯಗಳೇ ಇಲ್ಲ.

ಅವಳೆರಡು ಮಕ್ಕಳು ಚುರುಕಾಗಿದ್ದವು. ಅಮ್ಮನ ನೋವು, ಧೈರ್ಯಗಳ ಅರಿವಿದ್ದವು. ಓದು ಬರಹದಲ್ಲೂ ಹಿಂದೆ ಬಿದ್ದವರಲ್ಲ. ಯಾವುದಕ್ಕೂ ಕೊರತೆಯಾಗದಂತೆ ಬೆಳೆಸಿದ್ದಳು. ಅವುಗಳ ಪಾಲನೆ ಪೋಷಣೆ, ಓದು ಎಲ್ಲವು ಅವಳದು ಹಾಗು ಆಕೆಯ ಮೌನ ಸಂಗಾತಿ ಕಲ್ಯಾಣಿಯದು. ಕಲ್ಯಾಣಿ ಅವಳ ಸೌಭಾಗ್ಯಲಕ್ಷ್ಮಿ. ಅವಳ ದುಃಖವನ್ನು ಹಂಚಿಕೊಂಡ ಆತ್ಮೀಯೆ. ಕಲ್ಯಾಣಿಯನ್ನ ಪ್ರೀತಿಸುತ್ತಿದ್ದಳು, ಗೌರವಿಸುತ್ತಿದ್ದಳು. ಆ ಹಸು ಹಾಕಿದ ಕರುವೆಲ್ಲಾ ಗಂಡು ಎಂದು ಅತ್ತರೂ ಎಂದೂ ಅದನ್ನ ಶಪಿಸಿದವಳಲ್ಲ. ಮಾರಲು ಯೋಚಿಸಿದವಳಲ್ಲ.

"ನನ್ನ ಹೆಜ್ಜೆ ಸಪ್ಪಳ ಕೇಳಿದ್ರೆ ನಮ್ಮ ಕಲ್ಯಾಣಿ ಕಿವಿ ನಿಮಿರಿಸ್ತಾಳ್ರಿ, ಆಕೀನ ಬಿಟ್ಟು ಬರ್ತೀನಂದ್ರೆ ಮುಖ ಸಪ್ಪಗೆ ಮಾಡ್ತಾಳ್ರಿ ತುಂಬಾ ಸಾಧುರೀ........ ಆಕಿಗೆ ಒಣ ಹುಲ್ಲು ಅಂದ್ರೆ ಇಷ್ಟಾ ಇಲ್ಲ ನಮಗೆ ಒಣ ರೊಟ್ಟಿ ಇದ್ದಾಂಗೆ ಹಸಿ ಹುಲ್ಲು, ಹಿಂಡಿ ಅಂದ್ರೆ ಇಡ್ಲಿ ದೋಸಿ ಥರಾ ಆವ್ಗಿಗೆ, ಆಕೆಯ ಹಾಲಿನ ರುಚಿನೇ ಬೇರೆ, ವಾಸನೆ ಘಂ ಅನ್ನುತ್ತೆ........ಹೀಗೆ ಎಷ್ಟೊ ಮಾತುಗಳು ಕಲ್ಯಾಣಿ ಬಗ್ಗೆ. ಈಗೆಲ್ಲೊ ಯಲಹಂಕದಲ್ಲಿದ್ದಾಳೆ. ಸ್ವಂತ ಜಾಗ ಇದೆ. ಮಕ್ಕಳಿಬ್ಬರು ದುಡಿಯುತ್ತಾರೆ. ಈಗವಳು ಎರಡೊ, ಮೂರೋ ಹಸುಗಳ ಒಡತಿ

# ಅಮೀಲಿಯಾ ಇಯರ್‌ಹಾರ್ಟ್

ವೈಮಾನಿಕ ಕ್ಷೇತ್ರದಲ್ಲಿ ಪ್ರಪ್ರಥಮ ಹೆಜ್ಜೆಯೂರಿ ಆ ಮೂಲಕ ಭವಿಷ್ಯದಲ್ಲಿ ಮುಂಬರುವ ಸ್ತ್ರೀಯರಿಗೆ ಮೇಲ್ಪಂಕ್ತಿ ಹಾಕಿಕೊಟ್ಟ ಕೀರ್ತಿ ಕಾನಾಸ್‌ನ ಅಮಿಲಿಯಾ ಇಯರ್‌ಹಾರ್ಟರಿಗೆ ಸೇರಬೇಕು. ಪ್ರಪಂಚವನ್ನು ವಿಮಾನದಲ್ಲಿ ಸುತ್ತು ಹಾಕಿ ದಾಖಲೆ ಸ್ಥಾಪಿಸಹೊರಟಿದ್ದ ಅಮಿಲಿಯಾಗೆ ದುರದೃಷ್ಟಕಾದಿತ್ತು ಆಕೆಯಿರುವ ವಿಮಾನ ಪೆಸಿಫಿಕ್‌ಸಾಗರದ ಹೌಲಾಂಡ್ ದ್ವೀಪದ ಬಳಿ ಕಾಣೆಯಾಗಿತ್ತು ಎತ್ತರದ ವ್ಯಕ್ತಿತ್ವದ ನೀಲಿ ಕಂಗಳ ಈ ಚೆಲುವೆ ಚಾರ್ಲ್‌ಲಿಂಡ್‌ಬರ್ನ್‌ನನ್ನು ಹೋಲುತ್ತಿದ್ದುದರಿಂದ ಪತ್ರಕರ್ತರು ಆಕೆಯನ್ನು 'ಲೇಡಿ ಲಿಂಡ್ ಬರ್ಗ್' ಎಂದೇ ಕರೆಯುತ್ತಿದ್ದರು. ಬಾಲ್ಯದಿಂದಲೂ ಹುಡುಗರು ಆಡುತ್ತಿದ್ದ ಆಟಗಳ ಬಗ್ಗೆ ಹೆಚ್ಚಿನ ಆಸಕ್ತಿ, ಆಸೆ ತೋರಿದುದು ಅಷ್ಟೇ ಅಲ್ಲಿ. ಬೆಳೆದ ಮೇಲೂ ಪುರುಷರ ಚಟುವಟಿಕೆಗಳಲ್ಲೇ ತೊಡಗಿರುತ್ತಿದ್ದರು. ಆಕೆಯ ಛಲವಾದಿತನ, ಸಾಹಸಿ ಮನೋಭಾವ ಬುದ್ಧಿ ಚಾತುರ್ಯ ಉತ್ಸಾಹೀ ಗುಣಗಳೇ ಆಕೆಯ ಯಶಸ್ಸಿಗೆ ಕಾರಣವಾಗಿದ್ದವು.

1928 ರಲ್ಲಿ ಅಟ್ಲಾಂಟಿಕನ್ನು ವಿಮಾನದಲ್ಲಿ ಸುತ್ತುಹಾಕಿದ ಆಕೆಯ ಸಾಹಸ ವಿವಾಹದ ನಿಶ್ಚಿತಾರ್ಥದಲ್ಲೇ ಮುರಿದುಬಿಟ್ಟಿತ್ತು. ಆಕೆಯ ಭಾವಿಪತಿಯಾಗಿದ್ದ ಸ್ಯಾಮ್ಯುಯಲ್ ಚಾಪ್‌ಮನ್ (ಕೆಮಿಕಲ್ ಇಂಜಿನಿಯರ್) ತನ್ನ ಪತ್ನಿಯಾದವಳು ಉದ್ಯೋಗಿಯಾಗುವುದನ್ನು ಸಹಿಸದವನಾಗಿದ್ದ, ಆದಕಾರಣ ಅವರ ಸ್ನೇಹ ಅಲ್ಲಿಗೇ ಕಮರಿಹೋಯಿತು. ಆದರೆ ಅಟ್ಲಾಂಟಿಕ್‌ನ ಯಾತ್ರೆಯೇ ಅಮಿಲಿಯಾ ಹಾಗೂ ಜಾರ್ಜ್ ಪಾಮರ್ ಪುಟ್ನಾಮ್ ರನ್ನು ಸ್ನೇಹಿತರನ್ನಾಗಿ ಹತ್ತಿರ ತಂದಿತ್ತು. ಈಕೆಯ 'ನ್ಯೂಯಾರ್ಕ್ ಪಬ್ಲಿಷಿಂಗ್ ಹೌಸ್'ನ ಸಂಸ್ಥಾಪಕರ ಮಗ ಪುಟ್ನಾಮ್ ಅಟ್ಲಾಂಟಿಕ್ ಯಾತ್ರೆಯ ಪ್ರಚಾರ ಕಾರ್ಯ ವಹಿಸಿಕೊಂಡಿದ್ದರು ನಂತರ ಇಯರ್‌ಹಾರ್ಟ್‌ಗೆ ಸಲಹೆಗಾರರಾದರು. ಆಕೆಯ ಸಾಹಸದ ಪಯಣ ಕುರಿತು ಪುಸ್ತಕವನ್ನು ಬರೆಯಲು ಪ್ರೇರೇಪಿಸಿದವರು ಈತನೇ ಯಾವುದೇ ಕ್ಷಣದಲ್ಲಿ ಸಂತೋಷವಿಲ್ಲವೆಂದು ಕಂಡು ಬಂದರೆ ಬೇರೆಯಾಗುವ ನಿರ್ಧಾರವನ್ನು ತೆಗೆದುಕೊಂಡೇ ಇಯರ್‌ಹಾರ್ಟ್ ಹಾಗೂ ಪುಟ್ನಾಮ್ ವಿವಾಹವಾದರು. ಆಕೆಯ ಸ್ವತಂತ್ರ ಮನೋಭಾವ ಆಕ್ಷೇಪಣೆಗೆ ಒಳಗಾಗಲಿಲ್ಲ ಅಷ್ಟೇ ಅಲ್ಲ, ಪರಸ್ಪರರಲ್ಲಿ ನಂಬಿಕೆ ಕಡಿಮೆಯಾದಲ್ಲಿ ಒಟ್ಟಿಗಿರಬೇಕಾಗಿಲ್ಲ ಎಂಬ ವಚನಕ್ಕೆ ಬದ್ಧರಾಗಿ ಜೀವನ ನಡೆಸಿದ್ದರು. ಮದುವೆಯಾದ ಮೇಲೂ ತನ್ನ ಹೆಸರಿನ ಜೊತೆ ಗಂಡನ ಹೆಸರನ್ನು ಸೇರಿಸಿಕೊಳ್ಳಲಿಲ್ಲ. ವ್ಯಾವಹಾರಿಕ ಸಂಬಂಧದಂತೆ ಕಂಡು ಬಂದ ಇವರಿಬ್ಬರ ಜೀವನದಲ್ಲಿ ಮಕ್ಕಳಿಲ್ಲವಾದರೂ ಪುಟ್ನಾಮ್‌ಗೆ ಸಂಪತ್ತು, ಗೌರವಗಳನ್ನು ತಂದಿದ್ದರೆ ಇಯರ್‌ಹಾರ್ಟ್‌ಗೆ ಕೀರ್ತಿಯನ್ನು ಕೊಟ್ಟಿತು.

ಇಯರ್‌ಹಾರ್ಟ್ ಸಾಧಿಸಿದ ಸಾಹಸದ ದಾಖಲೆಗಳು ಬಿಡುವಿಲ್ಲದ ಚಟುವಟಿಕೆಗಳಿಂದಾಗಿ, ಔನ್ನತ್ಯಗಳಿಂದಾಗಿ ಆಕೆ ತನ್ನ ಮನೆಯಿಂದ ದೂರವಿರಬೇಕಾಯಿತು. 'ಮೀಲಿ' ಎಂದೇ ಉತ್ಸಾಹಿಯುವಕರ ಜನಪ್ರಿಯತೆಗೆ ಒಳಗಾದ ಇಯರ್‌ಹಾರ್ಟ್‌ಗೆ ಈ ಸ್ನೇಹ ತುಂಬ ಪ್ರಿಯವಾಗಿ ಕಂಡಿತ್ತು. ಹಾಲಿವುಡ್‌ನ ಸ್ಟಂಟ್ ಫ್ಲೈಯರ್ ಎಂದು ಹೆಸರಾಗಿದ್ದ, ಇವರ ವಿಶ್ವ ಪರ್ಯಾಟನೆಯಲ್ಲಿ ಅಮೀಲಿಯರ ವಿಮಾನದ ತಾಂತ್ರಿಕ ಮೇಲ್ವಿಚಾರಣೆ ವಹಿಸಿದ್ದ 31ರ ಪಾಲ್ ಮಾಂಟ್ಜ್ ಮತ್ತು ಫ್ರೆಡ್ ನೂನಾನ್ ತೀರ ಆಪ್ತರಾಗಿದ್ದರು ಅಮಿಲಿಯಾಗೆ. ನೂನಾನ್ ಕುಡಿತದ ಚಟವಿದ್ದ ಐರಿಷ್ ಪ್ರಜೆ ಹಾಗೂ ಅನೇಕ ಸಾಹಸಗಳನ್ನು ಕೈಗೊಂಡಿದ್ದ ಯುವಕ. ಅಮೀಲಿಯಾ ಒಂಟಿಯಾಗಿ ವಿಶ್ವ ಪರ್ಯಟನೆ ನಡೆಸಿ, ಹೆಚ್ಚಿನ ಕೀರ್ತಿ ಪಡೆಯಬೇಕೆಂಬ ಆಕೆಯ ಪತಿಯ ಸಲಹೆಯನ್ನು ಮೀರಿ ಫ್ರೆಡ್ ನೂನಾನ್ ಒಂದಿಗೆ ಪ್ರಪಂಚದ ಪರ್ಯಟನೆ(ಸಮಭಾಜಕ ವೃತ್ತವನ್ನನುಸರಿಸಿ) ಪ್ರಾರಂಭಿಸಿದ ಅಮಿಲಿಯಾ ಇಯರ್‌ಹಾರ್ಟ್‌ಗೆ ಅದೇ ಅಂತಿಮ ಸಾಹಸದ ಪಯಣವಾಗಿತ್ತು. ಆಕೆಯ ವಿಮಾನ ಪೆಸಿಫಿಕ್ ಸಾಗರದ ಬಳಿ ಕಣ್ಮರೆಯಾಗಿ ಅವರ ಖಾಸಗೀ ಜೀವನದ ಬಗ್ಗೆ ಸಾಕಷ್ಟು ಗುಲ್ಲೆಬ್ಬಿಸಿ, ಅನೇಕ ವದಂತಿಗಳನ್ನು ಹುಟ್ಟಿಸಿತ್ತು. ಅಮಿಲಿಯಾಗೆ, ನೂನಾನ್‌ರಿಗೆ ಪ್ರೇಮವ್ಯವಹಾರವಿತ್ತು, ಪೆಸಿಫಿಕ್ ಸಾಗರದ ದ್ವೀಪವೊಂದರಲ್ಲಿ ಆತನೊಡನೆ ವಾಸವಾಗಿದ್ದಾರೆ...... ಎಂಬೆಲ್ಲ ಗಾಳಿಸುದ್ದಿಗಳನ್ನು ಹಬ್ಬಿಸಲಾಗಿತ್ತು. ಇವೆಲ್ಲವನ್ನೂ ಪುಟ್ನಾಮ್ ನಿರಾಕರಿಸಿದ್ದರು. ಎರಡು ವರ್ಷಗಳಾದ ಮೇಲೆ ಮರು ವಿವಾಹವಾದರು.

# ಹುಟ್ಟು ಹೋರಾಟಗಾರ್ತಿ –

## ಅರುಣಾ ಅಸಫ್ ಆಲಿ

ಅರುಣಾ ಹುಟ್ಟಿದ್ದು ೧೯೧೦ರಲ್ಲಿ. ಬಂಗಾಳದವರಾದ ಇವರು ಕಾಂಗ್ರೆಸ್ ಮುಖಂಡರಾಗಿದ್ದ ಅಸಫ್ ಆಲಿಯವರನ್ನು ಮದುವೆಯಾಗಿದ್ದರು. ಅರುಣಾ ರಾಜಕೀಯ ರಂಗವನ್ನು ಪ್ರವೇಶಿಸಿದ್ದು ಕಾನೂನುಭಂಗ ಚಳುವಳಿಯಲ್ಲಿ. ಸರ್ಕಾರದ ಆಜ್ಞೆಗಳಿಗೆ ವಿರುದ್ಧವಾಗಿ ಸಭೆಗಳನ್ನು ನಡೆಸುವುದು, ಮೆರವಣಿಗೆಗಳನ್ನು ಏರ್ಪಡಿಸುವುದು, ಕಾನೂನಿಗೆ ವಿರುದ್ಧವಾಗಿ ಉಪ್ಪು ತಯಾರಿಸುವುದು ಮುಂತಾದ ಕಾರ್ಯಕ್ರಮಗಳಲ್ಲಿ ಆಕೆ ಭಾಗವಹಿಸಿದರು. ಗಾಂಧೀಜಿಯವರು ೧೯೪೨ರಲ್ಲಿ ಆರಂಭಿಸಿದ "ಚಲೇ ಜಾವ್" ಚಳುವಳಿಯಲ್ಲಿ ಆಕೆಯ ಪಾತ್ರ ಹಿರಿದು. ಪೋಲಿಸರ ಕಣ್ಣು ತಪ್ಪಿಸಿ ನಾನಾ ಚಟುವಟಿಕೆಗಳನ್ನು ಉತ್ತರ ಭಾರತದಲ್ಲಿ ಅತ್ಯಂತ ದಕ್ಷತೆಯಿಂದ ನಿರ್ವಹಿಸಿದ ಖ್ಯಾತಿ ಆಕೆಯದು. ಸುಮಾರು ನಾಲ್ಕು ವರ್ಷ ಕಾಲ ಪೊಲೀಸರ ಕೈಗೆ ಸಿಕ್ಕದೆ ಗುಪ್ತವಾಗಿದ್ದರು. ಆಕೆಯನ್ನು ಬಂಧಿಸಲು ಸಹಾಯ ಮಾಡಿದವರಿಗೆ ೫೦೦೦ ರೂಪಾಯಿ ಬಹುಮಾನ ಕೊಡುವ ಬ್ರಿಟಿಷ್ ಸರ್ಕಾರದ ಘೋಷಣೆ ವ್ಯರ್ಥವಾಯಿತು. ತಾವಾಗಿ ಪೊಲೀಸರಿಗೆ ಶರಣಾಗತರಾಗಬೇಕೆಂದು ಸೂಚಿಸಿ ಗಾಂಧೀಜಿ ಪತ್ರ ಬರೆದರೂ ಆಕೆ ಅದಕ್ಕೊಪ್ಪಲಿಲ್ಲ. ಕೊನೆಗೆ ಪೊಲೀಸರೇ ಆಕೆಯ ದಸ್ತಗಿರಿ ಆಜ್ಞೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕಾಯಿತು!

ತನ್ನ ಚಟುವಟಿಕೆಗಳಿಂದಾಗಿ ಸೆರೆಮನೆವಾಸವನ್ನು ಅನುಭವಿಸಿದರು, ಒಮ್ಮೆ, ರಾಜಕೀಯ ಕೈದಿಗಳ ಬಗೆಗೆ ಸರ್ಕಾರ ಹೀನಾಯವಾಗಿ ವರ್ತಿಸುತ್ತಿದ್ದರೆ ವಿರುದ್ಧವಾಗಿ ಪ್ರತಿಭಟನಾ ಸತ್ಯಾಗ್ರಹವನ್ನು ಆರಂಭಿಸಿದ್ದಕ್ಕಾಗಿ ಅಂಬಾಲದಲ್ಲಿ ಏಕಾಂತವಾಸ ಶಿಕ್ಷೆಯನ್ನು ಅನುಭವಿಸಿದರು. ಇವರು "ಇಂಕ್ವಿಲಾಬ್" ಎಂಬ ಪತ್ರಿಕೆಯನ್ನು ನಡೆಸುತ್ತಿದ್ದರು. ಸ್ವಾತಂತ್ರ್ಯದ ನಂತರ ರಾಜಕೀಯ ಕ್ಷೇತ್ರದಿಂದ ದೂರ ಸರಿದು ರಚನಾತ್ಮಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ೧೯೫೮ರಲ್ಲಿ ದೆಹಲಿ ನಗರದ ಮೇಯರ್ ಆಗಿ ಚುನಾಯಿತರಾದರು. ೧೯೬೪ರಲ್ಲಿ ಅವರಿಗೆ ಲೆನಿನ್ ಶಾಂತಿ ಬಹುಮಾನ ದೊರೆಯಿತು. ಅಖಿಲ ಭಾರತ ಶಾಂತಿ ಮಂಡಲಿ, ಭಾರತ ಮಹಿಳೆಯರ ರಾಷ್ಟ್ರೀಯ ಫೆಡರೇಶನ್ ಈ ಕ್ಷೇತ್ರಗಳಲ್ಲಿ ಅರುಣಾರ ಸೇವೆ ಗಣನೀಯ.

(ಕೃಪೆ : ಜ್ಞಾನ ಗಂಗೋತ್ರಿ)

---

## ಚಂದಾದಾರರಿಗೆ

ಶತಮಾನಗಳಿಂದ ತುಳಿತಕ್ಕೊಳಗಾದ ಸ್ತ್ರೀಯರ ಧ್ವನಿಯಾದ ಮಾನಸ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಪ್ರಾರಂಭಿಸಿದರೂ, ಆರ್ಥಿಕ ಕಾರಣಗಳಿಂದಾಗಿ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಲು ಸಾಧ್ಯವಾಗದೆ ಇರುವುದನ್ನು ನೀವು ಈಗಾಗಲೇ ಗಮನಿಸಿರಬಹುದು.

ನಮ್ಮೆಲ್ಲರ ಪ್ರಾಮಾಣಿಕ ಪ್ರಯತ್ನವನ್ನು ಮೀರಿ ಅಡಿಗಡಿಗೆ ಎದುರಾಗುವ ಸಮಸ್ಯೆಯಿಂದಾಗಿ ಪತ್ರಿಕೆ ತುಂಬಾ ವಿಳಂಬಗತಿಯಲ್ಲಿ ಪ್ರಕಟವಾಗುತ್ತಿದೆ. ಪತ್ರಿಕೆಯ ವೆಚ್ಚವನ್ನು ಕಡಿಮೆ ಮಾಡುವ ಉದ್ದೇಶದಿಂದ ಒಂದು ಪುಟ್ಟದಾದ ಅಚ್ಚುಮೊಳೆಯ ಕೇಂದ್ರವನ್ನು ಈಗಾಗಲೇ ಪ್ರಾರಂಭಿಸಿದ್ದೇವೆ. ಇದರ ಖರ್ಚು ವೆಚ್ಚಗಳೊಂದಿಗೆ ಬಾಡಿಗೆಗೆ ಹಣ ಹೊಂದಿಸುವುದು ದುಸ್ತರವಾಗುತ್ತಿದೆ. ಈ ಹಂತದಲ್ಲಿ ಪತ್ರಿಕೆಯ ಆತ್ಮೀಯ ಹಿತೈಷಿಗಳಾದ ನಿಮಗೆ ಈ ಕೆಳಗಿನ ಕಳಕಳಿಯ ಮನವಿಯನ್ನು ಮಾಡುತ್ತಿದ್ದೇವೆ. ಪ್ರತಿಂಗಳೂ ಮಾನಸ ಆಫೀಸ್ ಬಾಡಿಗೆಗೆಂದು 5.00ರೂ. ಕಳಿಸಲು ಸಾಧ್ಯವೆ? ಪ್ರತಿ ತಿಂಗಳೂ ಕಳಿಸುವುದು ಸಮಸ್ಯೆಯೆನಿಸಿದರೆ, ಅರ್ಧ ವರ್ಷದ ಅಂದರೆ ರೂ.30-00 ಅಥವಾ ಒಂದು ವರ್ಷದ 60-00ರೂ. ಒಟ್ಟಿಗೆ ಕಳಿಸಬಹುದು. ನಮ್ಮ ಈ ಕಿರು ಪ್ರಯತ್ನಕ್ಕೆ ನಿಮ್ಮ ಬೆಂಬಲ ಮತ್ತು ಪ್ರೋತ್ಸಾಹವಿದೆಯೆಂಬ ಭರವಸೆ ನಮಗಿದೆ.

---

# ಸಂಜೆಗಣ್ಣಿನ ಹಿನ್ನೋಟ

ಲೇ : ಎ. ಎನ್. ಮೂರ್ತಿರಾವ್.
ಮುದ್ರಕರು- ಜಿ. ಎಸ್. ಕೃಷ್ಣಮೂರ್ತಿ.
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
ಮೈಸೂರು-೫೭೦೦೦೧

ಹೊಳೆ ನರಸಿಪುರಕ್ಕೆ ಸಂಬಂಧಪಟ್ಟ ಕಥೆ. ಹೊರಕೇರಿಯಲ್ಲಿ ತಕ್ಕ ಮಟ್ಟಿಗೆ ಗಣ್ಯನಾದ ಮನುಷ್ಯನೊಬ್ಬನನ್ನು ಕುರಿತದ್ದು. ನಾನು ಹೇಳಲಿರುವ ಘಟನೆ ನಡೆದಾಗ ಅವನಿಗೆ 35-40 ವರ್ಷವಾಗಿರಬಹುದು. ಆತ ಯಾವುದೋ ಮದುವೆಯ ಸಂದರ್ಭದಲ್ಲಿ ಸಂಗೀತಕ್ಕಾಗಿ ನರಸಿಪುರದ ವೇಶ್ಯೆಯೊಬ್ಬಳನ್ನು ಕರೆಸಿದ್ದ ಅವಳು ಹಾರ್ಮೋನಿಯಂ ನುಡಿಸಿಕೊಂಡು ಹಾಡಿದ್ದನ್ನು ಕೇಳಿದ ನೆನಪಿದೆ. ಮದುವೆಯ ಸಡಗರವೆಲ್ಲ ಮುಗಿದು ಅವಳು ನರಸಿಪುರಕ್ಕೆ ಹೋಗಿ ಒಂದು ತಿಂಗಳಾದ ಮೇಲೆ ಮತ್ತೆ ಬಂದಳು : ಆ ಗಣ್ಯನ ಮನೆಯಲ್ಲೇ ಇದ್ದು ಬಿಟ್ಟಳು ಆಕೆ ಸಂಸಾರಕ್ಕೆ ಸೇರಿದವಳಂತೆ ಮನೆಗೆಲಸಗಳನ್ನೆಲ್ಲ ಮಾಡುತ್ತಿದ್ದಳು, ಕುಕ್ಕೆ ಹೊತ್ತುಕೊಂಡು ಹೊಲಗದ್ದೆಗಳಿಗೆ ಹೋಗುತ್ತಿದ್ದಳು. ಇದು ಊರಿಗೆಲ್ಲ ತಿಳಿದ ವಿಷಯ ಮುಚ್ಚು ಮರೆಯೇನೂ ಇರಲಿಲ್ಲ. ಮೊದಲ ಕೆಲವು ದಿನ ಒಬ್ಬರಿಬ್ಬರು ಗುಸುಗುಸು ಎನ್ನುತ್ತಿದ್ದರಂತೆ. ಆಗ ಆ ಗಣ್ಯ “ಸೂಳೆಯಾಗಿದ್ದಳು ಈಗ ಗರತಿಯಾಗವಳೆ: ಇದಕ್ಯಾಕೆ ಅಳ್ತಿರ!” ಎಂದನಂತೆ ಸಮಸ್ಯೆ ಜಟಿಲವಾದದ್ದು. ಉದಾಹರಣೆಗೆ: ಆತನ ಮದುವೆಯಾದ ಹೆಂಡತಿ ಏನೆಂದು ಕೊಂಡಳು ಎಂಬುದು ಗಮನಿಸಬೇಕಾದ ವಿಷಯ. ಜಟಿಲತೆಯನ್ನು ಮರೆತು ಆ ಗಣ್ಯನ ಮಾತನ್ನು ಪರಿಶೀಲಿಸಿದರೆ ಅದರಲ್ಲಿ ಹುರುಳಿದೆ ಎನಿಸುತ್ತದೆ. ಆಕೆ ಅವನೊಡನೆಯೇ ಬಾಳಿ ಅಕ್ಕಿಹೆಬ್ಬಾಳಿನಲ್ಲೇ ಸತ್ತಳು. ಆ ಪ್ರಸಂಗವನ್ನು ಸಮಾಜ ಜೀರ್ಣಿಸಿಕೊಂಡಿತು.

ಇದಕ್ಕಿಂತ ಹೆಚ್ಚಾಗಿ ನನಗೆ ಆಶ್ಚರ್ಯವುಂಟುಮಾಡಿದ ಸಂಗತಿ ನಮ್ಮ ಕೇರಿಯವಳೇ ಆದ ಒಬ್ಬಾಕೆಯನ್ನು ಕುರಿತದ್ದು. ಈಗ ಅವಳ ಹೆಸರನ್ನು ಗುರುತಿಸ ಬಲ್ಲವರಾಗಲಿ ಅಂಥವಳೊಬ್ಬಳಿದ್ದಳೆಂದು ಬಲ್ಲವರಾಗಲಿ ನನ್ನ ಹೊರತು ಮತ್ತೆ ಯಾರು ಬದುಕಿಲ್ಲ. ಆದರೂ ಅವಳ ಹೆಸರು ಹೇಳುವುದು ಬೇಡ ಅಮ್ಮಯ್ಯ ಎಂದು ಕರೆಯುತ್ತೇನೆ. ನಾನು ನೋಡಿದಾಗ ಅವಳಿಗೆ 30-35 ವರ್ಷವಾಗಿದ್ದಿರಬಹುದು. ಚಿಕ್ಕಂದಿನಲ್ಲೇ ವಿಧವೆಯಾದದ್ದರಿಂದಲೋ ಏನೋ ಅವಳ ತಲೆ ಗೂದಲನ್ನು ತೆಗೆಸಿರಲಿಲ್ಲ. ಅಕ್ಕಿ ಹೆಬ್ಬಾಳು ಅವಳ ತವರೂರು ಗಂಡ ಸತ್ತ ಮೇಲೆ ಸ್ವಲ್ಪ ಕಾಲ ಅವಳು ಮಾವನ ಮನೆಯಲ್ಲೇ ಇದ್ದಳು ಒಂದು ಸಾರಿ ದಾರಿ ತಪ್ಪಿ ನಡೆದು ಗರ್ಭಿಣಿಯಾದಳು. ಎಲ್ಲಿಗೋ (ಘಂಶರಪುರಕ್ಕೆ?) ಹೋಗಿ ಮೈಯಿಳಿಸಿಕೊಂಡು ಆಮೇಲೆ ನಮ್ಮೂರಿಗೆ ಬಂದು ಅಲ್ಲೇ ಇದ್ದು ಬಿಟ್ಟಳು. ತಕ್ಕ ಮಟ್ಟಿಗೆ ಲಕ್ಷಣವಾದ ಹೆಂಗಸು ಸೌಮ್ಯವಾದ ತುಂಬು ಮುಖ. ಆಕೆಯ ಪ್ರಾಯದ ಕಥೆ ಊರಿನವರೆಲ್ಲರಿಗೂ ತಿಳಿದ ವಿಷಯ. ಹುಡುಗರಾದ ನಮ್ಮ ಕಿವಿಗೂ ಆಗಾಗ ಬಿದ್ದಿತ್ತು. ಆದರೂ ಅಮ್ಮಯ್ಯ ಎಲ್ಲರ ಮನೆಗೂ ಹೋಗಿ ಬರುತ್ತಿದ್ದುದುಂಟು. ನನ್ನ ಮುಂದೆಯೆ ದಿನ ಸಂಜೆ ಆಕೆ ಬಂದು ನನ್ನನ್ನು ಅಕ್ಕರೆಯಿಂದ ಮಾತಾಡಿಸಿ “ತಣ್ಣಗೆ ಬದುಕಪ್ಪಮಗ” ಎಂದು ಹೇಳಿ ಹೋದದ್ದು ನೆನಪಿದೆ. ಮದುವೆ ಮುಂಜಿ ಹಬ್ಬ ಹರಿದಿನ ಇಂಥ ಕಾಲದಲ್ಲಿ ಅವಳು ಸಭೆಯ ಮಧ್ಯೆ ಎಲ್ಲ ಹೆಂಗಸರೊಡನೆ ಬಂದು ಕೂರುತ್ತಿರಲಿಲ್ಲ. ಈ ವಿಷಯದಲ್ಲಿ ಊರಿನ ಜನ ಹಳೆಯ ಕಾಲದ ಕ್ರೂರ ನಿಯಮಗಳನ್ನು ಕಟ್ಟು ನಿಟ್ಟಾಗಿಯೇ ಪಾಲಿಸುತ್ತಿದ್ದರು. ಅಮ್ಮಯ್ಯನು ಆಕ್ಷೇಪಣೆಗೆ ಅವಕಾಶ ಕೊಡದಂತೆ ನಡೆದು ಕೊಳ್ಳುತ್ತಿದ್ದಳು. ಜನರ ಮನಸ್ಸಿನಲ್ಲಿ ಯಾವ ಭಾವನೆಯಿತ್ತೋ ಏನೋ ಹೊರಗಂತು ಆಕೆಗೆ ಯಾರೂ ಅವಮಾನಮಾಡಿದ್ದನ್ನು ಕಾಣೆ ; ಕಡೆಗಣಿಸಿ ದೂರಿ ಆಕೆಯ ಅವಮಾನವನ್ನು ಎತ್ತಿ ಆಡಿ ಅವಳು ಸಂಕಟ ಪಡುವಂತೆ ಮಾಡಿದ್ದನ್ನು ಕಾಣೆ. ಯಾರ ಮುಖದಲ್ಲಾಗಲಿ ದೈನ್ಯವನ್ನು ಕಂಡಾಗ “ನಾನು ಇತರರ ಸಮನಲ್ಲ ಕೀಳು” ಎಂಬ ಭಾವನೆಯನ್ನು ಕಂಡಾಗ ನನಗೆ ಮುಜುಗರ ಮಾತ್ರವಲ್ಲ ಒಂದು ಬಗೆಯ ಮೂಕವೇದನೆಯಾಗುತ್ತದೆ. ಅಂಥ ದೈನ್ಯವನ್ನು ನಾನು ಅಮ್ಮಯ್ಯನ ಮುಖದಲ್ಲಿ ಕಾಣಲಿಲ್ಲ. ಅವಳಂತಯೇ ತಪ್ಪು ಮಾಡಿದ ಮದುವೆಯಿಲ್ಲದ ಹೆಂಗಸೊಬ್ಬಳೊಡನೆ ಬಾಳ್ವೆ ನಡೆಸಿದ ಉಡುಪಿರಾಯರೆಂಬವರನ್ನು ನಮ್ಮೂರಿನವರು ಅಸಮಾಧಾನವನ್ನು ವ್ಯಕ್ತಪಡಿಸದೆ ನಡೆಸಿಕೊಂಡರೆಂಬುದನ್ನು ಬೇರೊಂದ್ವ ಕಡೆ ನೆನೆದಿದ್ದೇನೆ.

ನಮ್ಮೂರಿನ ವಾತಾವರಣ ಸಮ್ಮತಿಪ್ರದ (ಪರ್ಮಿಷನ್) ವಾದದ್ದಲ್ಲ. ಮದುವೆಗೆ ಹೊರತಾದ ಲೈಂಗಿಕ ಸಂಬಂಧದ ಖಂಡನೆ ಅವರಲ್ಲಿ ಸ್ಪಷ್ಟವಾಗಿಯೇ ಕಾಣುತ್ತಿತ್ತು. ಆದರೂ ಅಮ್ಮಯ್ಯ ಅಲ್ಲಿ ನೆಮ್ಮದಿಯಿಂದ ಬದುಕುವುದು ಹೇಗೆ ಸಾಧ್ಯವಾಯಿತು? “ಪಾಪ ಅವಳು ಯೌವನಕ್ಕೆ ಕಾಲಿಟ್ಟ ಹೊಸದರಲ್ಲೇ ವಿಧಿ ಅವಳಿಂದ ಎಲ್ಲ ಸುಖವನ್ನು ಕಸಿದುಕೊಂಡು ಬಿಟ್ಟಿತು.” ಎಂಬ ಮರುಕ ಊರಿನವರಲ್ಲಿ ಅವರ ಅರಿವಿಲ್ಲವೆಯೇ ಜಾಗೃತವಾಗಿತ್ತೆ? “ಅವಳ ಕರ್ಮದ ಫಲವನ್ನು ಅವಳು ಅನುಭವಿಸಬೇಕು ; ಅನುಭವಿಸಲಿ” ಎಂಬ ನಿಷ್ಠುರ ಮನೋವೃತ್ತಿಯನ್ನು ಅದುಮಿ “ತಪ್ಪು ಅವಳದ್ದೆ ಆಗಲಿ ಯಾರದ್ದೇ ಆಗಲೀ, ಸಂಕಟ ಸಂಕಟವೇ ಅದನ್ನು ಮರೆಸಬೇಕೇ ಹೊರತು ಹೆಚ್ಚಿಸಬಾರದು” ಎನ್ನುವ ಮನೋವೃತ್ತಿಯದೇ ಮೇಲುಗೈಯಾಯಿತೆ?

# ಆಟಕ್ಕೆ ಮುಂಚೆ ಅಗ್ನಿಪರೀಕ್ಷೆ

ಎಚ್. ಎಸ್. ರಾಜೇಶ್ವರಿ

ಯಾವುದೇ ರಾಷ್ಟ್ರೀಯ ಅಥವಾ ಅಂತರರಾ ಷ್ಟ್ರೀಯ ಸ್ಪರ್ಧೆಯಲ್ಲಿ ಭಾಗವಹಿಸುವ ಮಹಿಳೆ ಮೊದಲು ಎದುರಿಸಬೇಕಾದ ಅಗ್ನಿಪರೀಕ್ಷೆ ಅವಳು ಸ್ತ್ರೀ ಎಂಬುದನ್ನು ಖಚಿತಪಡಿಸಿಕೊಳ್ಳಬೇಕಾಗಿರುವುದು. ಮತ್ತೊಬ್ಬ ಸ್ಪರ್ಧಿಗೆ ನ್ಯಾಯ ದೊರಕಿಸಿಕೊಡುವ ಈ ಪರಿಕಲ್ಪನೆ ವಿವಾದಾಸ್ಪದವಾಗಿದ್ದು ಜೀವನದಾದ್ಯಂತ ಘೋರ ವಾದ ಪರಿಣಾಮವನ್ನು ಬೀರುತ್ತದೆ.

೧೯೮೮ — ೯೦ರಲ್ಲಿ ರಾಂಚಿಯಲ್ಲಿ ನಡೆದ ರಾಷ್ಟ್ರೀಯ ಮಹಿಳಾ ಚಾಂಪಿಯನ್ ಶಿಪ್‌ನಲ್ಲಿ ಭಾಗವಹಿಸಿದ ಮಹಿಳೆಯ ಸ್ತ್ರೀತ್ವವನ್ನು ಪರೀಕ್ಷೆಗೊಳಪಡಿಸಿ ಅವಳು "ಸ್ತ್ರೀ" ಯೇ ಅಲ್ಲವೆಂದು ತೀರ್ಮಾನಮಾಡಲಾಯಿತು. ಈ ತೀರ್ಮಾನದ ಫಲವಾಗಿ ಆಕೆ ಸ್ಪರ್ಧೆಯಿಂದ ಹಿಂದೆಗೆಯಬೇಕಾಯಿತು,

ಜಾವೆಲೀನ್ ಎಸೆತದಲ್ಲಿ ಖ್ಯಾತಿ ಗಳಿಸಿದ ಇಭಾ ಮನ್ನಿದೇವಿಯು ಇಂತಹುದೇ ಪ್ರಸಂಗವನ್ನು ಎದುರಿಸಬೇಕಾಯಿತು. ೧೯೮೨ರಲ್ಲಿ ದೆಹಲಿಯಲ್ಲಿ ನಡೆದ ಏಷಿಯಾಡ್‌ನಲ್ಲಿ ಇಬಾ "ಸ್ತ್ರೀ" ಯಲ್ಲವೆಂಬ ಕಾರಣಕ್ಕಾಗಿ ಅವಕಾಶವನ್ನು ತಿರಸ್ಕರಿಸಲಾಯಿತು,

೧೯೭೦ರಲ್ಲಿ ಎಲ್ಲರ ಮನಸೆಳೆದ ಸ್ಪ್ರಿಂಗ್‌ರಾಣಿ ಅನಸೂಯಾ ದೇವಿ ಈ ಅಗ್ನಿಪರೀಕ್ಷೆಯ ಕಾರಣದಿಂದಾಗಿಯೇ ತನ್ನ ಜೀವನದ ಮಹತ್ವಾಕಾಂಕ್ಷೆಯ ಕುಡಿಯನ್ನು ಚಿವುಟಿ ಹಾಕಬೇಕಾಯಿತು. ಟೆಹರಾನ್‌ನಲ್ಲಿ ನಡೆದ ಏಷಿಯನ್ ಗೇಮ್ಸ್‌ನಲ್ಲಿ ಮೊದಲ ಬಾರಿಗೆ ಅನಸೂಯಾ ಈ ಪರೀಕ್ಷೆಗೆ ಒಳಗಾಗಬೇಕಾಯಿತು. ೧೯೭೮ರಲ್ಲಿ ಪುನಃ ಇದೇ ಕಾರಣಕ್ಕಾಗಿ ಬ್ಯಾಂಕಾಕ್‌ನಲ್ಲಿ ನಡೆದ ಏಷಿಯಾಡ್‌ನಿಂದ ಹೊರಬರಬೇಕಾಯಿತು. ಈ ಘೋರ ಪರೀಕ್ಷೆಯ ಕಾರಣದಿಂದಾಗಿಯೇ ಅನಸೂಯಾ ಸ್ಪರ್ಧೆಗಳಿಂದ ನಿವೃತ್ತಳಾಗಿ ಮಾಮೂಲಿ ಹೆಂಗಸಿನಂತೆ ಕತ್ತಲಿನಲ್ಲಿ ತನ್ನ ಜೀವನವನ್ನೂ ಕಳೆಯಬೇಕಾಗಿದೆ.

ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಆಟದ ಸ್ಪರ್ಧೆಗಳಲ್ಲಿ ಭಾಗವಹಿಸುವ ಪ್ರತಿಯೊಬ್ಬ ಮಹಿಳಾ ಸ್ಪರ್ಧಿಯು ತನ್ನ "ಸ್ತ್ರೀತ್ವದ" ಪರೀಕ್ಷೆಗೆ ಕಡ್ಡಾಯವಾಗಿ ಒಳಗಾಗಬೇಕಾಗುತ್ತದೆ. ತನ್ನ ಜೊತೆಯಲ್ಲಿ ಸ್ಪರ್ಧಿಸುವ ಇತರ ಆಟಗಾರರಿಗಿಂತ, ಯಾವುದೇ ರೀತಿಯ ಅನುಕೂಲವನ್ನು ಸ್ಪರ್ಧಿಯು ಪಡೆಯದಿರಲೆಂಬ ಉದ್ದೇಶದಿಂದ ಈ ಪರೀಕ್ಷೆಯನ್ನು ನಡೆಸುವ ಉದ್ದೇಶ. ಕೃತಕ ವಿಧಾನಗಳಿಂದ ಅಥವಾ ಸಹಜವಾಗಿ ಸ್ತ್ರೀಯಾದವಳು ಹೆಚ್ಚು ಪುರುಷನಂತಿರುವಳೇ ಎಂದು ಕಂಡು ಹಿಡಿಯುವುದು ಈ ಪರೀಕ್ಷೆಯ ಉದ್ದೇಶ.

ಈ ಪರೀಕ್ಷೆಯ ಹಿಂದಿರುವ ತತ್ವ ಹಲವಾರು ವಿವಾದಗಳನ್ನು ಹುಟ್ಟುಹಾಕಿದೆ. ಸ್ತ್ರೀತ್ವ ಎಂದರೇನು? ಅದರ ವ್ಯಾಖ್ಯಾನವನ್ನು ಹೇಗೆ ಮಾಡಲಾಗಿದ? ಎಂದು ಮಾಡಲಾಗಿದೆ? ಕಾಲಕಾಲಕ್ಕೆ ಈ ವ್ಯಾಖ್ಯಾನದಲ್ಲಿ ಏನಾದರೂ ಬದಲಾವಣೆ ಉಂಟಾದಯೆ? ಪುರುಷ ಮತ್ತು ಸ್ತ್ರೀಯಲ್ಲಿರುವ ಭಿನ್ನತೆಗಳನ್ನು ಹೇಗೆ ಗುರುತಿಸಲಾಗಿದೆ.

ಖಚಿತ ಸ್ಪರ್ಧೆಗಳಲ್ಲಿ ಭಾಗವಹಿಸುವ ಉದ್ದೇಶದಿಂದಲೇ ನಿರಂತರವಾಗಿ ತಯಾರಿ ನಡೆಸುವ ಮಹಿಳೆಯರು

ಸ್ಪರ್ಧೆಗೆ ಮೊದಲು ಸ್ತ್ರೀತ್ವದ ಪರೀಕ್ಷೆಗೆ ಒಳಗಾಗ ಬೇಕಾಗುತ್ತದೆ ಈ ಅಗ್ನಿ ಪರೀಕ್ಷೆಯಲ್ಲಿ ಆಕೆಯೇನಾದರೂ ಸ್ತ್ರೀಯಲ್ಲವೆಂದು, ಆಕೆಯ ದೈಹಿಕ ರಚನೆಯಲ್ಲಿ ಪುರುಷತ್ವ ಅಂಶಗಳೇನಾದರೂ ಕಂಡು ಬಂದವೆಂದರೆ ಅವಳಿಗೆ ಪ್ರವೇಶವನ್ನು ನಿರಾಕರಿಸಲಾಗುತ್ತದೆ. ಆಟಗಾರ್ತಿಯರು ಕಡ್ಡಾಯವಾಗಿ ಒಳಗಾಗುವ ಈ ಪರೀಕ್ಷೆಯು ಅವರ ಮನಸ್ಸಿನ ಮೇಲೆ ಬೀರುವ ಘೋರ ಪರಿಣಾಮವನ್ನು ನೆನಸಿಕೊಂಡರೆ ಆತಂಕ ಉಂಟಾಗುತ್ತದೆ. ಸ್ತ್ರೀತ್ವದ ಪರೀಕ್ಷೆಗೊಳಗಾಗಿ ಅದರಲ್ಲಿ ಏನಾದರೂ ಅವರು ಉತ್ತೀರ್ಣರಾಗದೆ ಸ್ಪರ್ಧೆಯಿಂದ ಬಹಿಷ್ಕೃತರಾದರೆ ಅದು ಅವರ ಸಾಮಾಜಿಕ ಜೀವನದಲ್ಲಿ ಉಂಟುಮಾಡುವ ಪರಿಣಾಮವೇನು ಸ್ತ್ರೀಯರ ವ್ಯಕ್ತಿತ್ವವನ್ನೇ ನಿರಾಕರಿಸುವ ಈ ಪರೀಕ್ಷೆಯ ಪರಿಣಾಮವನ್ನು ಅವರು ಹೇಗೆ ಎದುರಿಸಬಲ್ಲರು?

ಕ್ರೀಡಾ ಜಗತ್ತಿನ ಇತಿಹಾಸದತ್ತ ಹೊರಳಿ ನೋಡಿದಾಗ ಇಂತಹ ಪರೀಕ್ಷೆಯ ಅನಿವಾರ್ಯತೆಯ ಅಂಶ ಕಂಡು ಬರುತ್ತದೆ. ಪಶ್ಚಿಮ ಜರ್ಮನಿಯ ಆಟಗಾರನೊಬ್ಬ ನಾಜಿ ಅಧಿಕಾರಿಗಳ ಒತ್ತಡದಿಂದಾಗಿ ಸ್ತ್ರೀಯೆಂದೇ ಹಲವಾರು ಕ್ರೀಡಾ ಸ್ಪರ್ಧೆಗಳಲ್ಲಿ ಭಾಗವಹಿಸಿ ದಾಖಲೆಗಳನ್ನು ಸ್ಥಾಪಿಸಿದ್ದ.

೧೯೭೧ - ೭೨ ರಲ್ಲಿ ೧೦೦, ೨೦೦ ಮೀ ಓಟದಲ್ಲಿ ದಾಖಲೆ ಸ್ಥಾಪಿಸಿದ ಭಾರತದ ನಾನಿ ರಾಧಾ ಇದ್ದಕ್ಕಿದ್ದಂತೆ ಕ್ರೀಡಾ ಜಗತ್ತಿನಿಂದ ಮರೆಯಾದಳು ೧೯೮೧ ರಲ್ಲಿ ಪಿ. ಟಿ. ಉಷಾ ರಾಧಾ ಸ್ಥಾಪಿಸಿದ ದಾಖಲೆಯನ್ನು ಮುರಿದಾಗಲೇ ಅವಳ ಹೆಸರು ಪುನಃ ಕೇಳಿ ಬಂದದ್ದು. ಎಪ್ಪತ್ತರ ದಶಕದಲ್ಲಿ ರಾಧಾ ಲಿಂಗ ಬದಲಾವಣೆಯ ಅಪರೇಶನ್‌ಗೆ ಒಳಗಾಗಿ ರಾಧಾಕೃಷ್ಣನಾಗಿ ಪರಿವರ್ತಿತಳಾದಳು.

ಇಂತಹ ನಿದರ್ಶನಗಳು ಕ್ರೀಡಾ ಜಗತ್ತಿನಲ್ಲಿ ಅಪರೂಪವೇನಲ್ಲ. ಆದರೆ ಈ ಕಾರಣದಿಂದಾಗಿ ಕಡ್ಡಾಯವಾಗಿ ಸ್ತ್ರೀತ್ವದ ಪರೀಕ್ಷೆಯನ್ನೇ ಒಪ್ಪಿಕೊಳ್ಳಬೇಕೆ? ಸ್ತ್ರೀತ್ವದ ಪರೀಕ್ಷೆಯ ಹಿಂದಿರುವ ಮೌಲ್ಯಗಳಾವುವು? ಸ್ತ್ರೀತ್ವದ ಪರೀಕ್ಷೆಯ ವ್ಯಾಖ್ಯಾನ ಸ್ತ್ರೀಪರವಾಗಿದೆಯೆ? ಅಥವಾ ಪುರುಷರಿಂದ ರೂಪುಗೊಂಡ ವ್ಯಾಖ್ಯಾನ ಪೂರ್ವಗ್ರಹಗಳಿಂದ ಕೂಡಿದೆಯೇ?

ವಿಪರ್ಯಾಸವೆಂದರೆ ಬಹಳಷ್ಟು ಖ್ಯಾತ ಆಟಗಾರ್ತಿಯನ್ನು ಇಂತಹ ಪರೀಕ್ಷೆಗೆ ನಿಷ್ಠೆಯ ಮೌನವಾಗಿ ಸಮ್ಮತಿ ನೀಡುತ್ತಾರೆ. ಖ್ಯಾತ ಕ್ರೀಡಾ ಸ್ಪರ್ಧೆಗಳಲ್ಲಿ ಭಾಗವಹಿಸುವ ಕಾತುರ ಮಹತ್ವಾಕಾಂಕ್ಷೆಯಿಂದಾಗಿ ಸ್ತ್ರೀತ್ವದ ಪರೀಕ್ಷೆಯನ್ನು ಒಂದು ಅನಿವಾರ್ಯವಾದುದೆಂದು ಸ್ವೀಕರಿಸುವ ಮನೋಭಾವ ಬಹಳಷ್ಟು ಆಟಗಾರ್ತಿಯರಿಗಿದೆ ಆದರೆ ಈ ಅನಿವಾರ್ಯತೆ ಈ ನಿರ್ದಯ ಪರೀಕ್ಷೆಯ ಹಿಂದಿರುವ ವಿವಾದಾಸ್ಪದ ಅಂಶವನ್ನು ವ್ಯಾಖ್ಯಾನದ ಹಿಂದಿರುವ ಮೂಲಭೂತ ಪ್ರಶ್ನೆಯನ್ನು ತಳ್ಳಿಹಾಕಲಾರದು ಪುರುಷ ಮತ್ತು ಸ್ತ್ರೀಯರ ನಡುವಿರುವ ದೈಹಿಕ ವ್ಯತ್ಯಾಸವನ್ನು ವೈಜ್ಞಾನಿಕವಾಗಿ ಗುರುತಿಸುವುದರ ಜೊತೆಗೆ ಸ್ತ್ರೀಯೊಬ್ಬಳು ಪುರುಷನಲ್ಲಿನ ಅಂಶಗಳನ್ನು ಹೊಂದಿದ್ದು ಇತರ ಮಹಿಳಾ ಕ್ರೀಡಾಸ್ಪರ್ಧಿಗಳಿಗಿಂತ ಹೆಚ್ಚು ಅವಕಾಶವನ್ನು ಹೊಂದಿರುವುದನ್ನು ತಡೆಹಿಡಿಯಲು ಈ ಪರೀಕ್ಷೆಯು ಅನಿವಾರ್ಯವಾಗಿದೆ. ನೈಸರ್ಗಿಕವಾಗಿರುವ ಕಾರಣ ಹಾಗೂ ಕೃತಕ ವಿಧಾನಗಳಿಂದ ಪಡೆಯುವ ಅನುಕೂಲವನ್ನು ಪರೀಕ್ಷೆಯಿಂದಾಗಿ ಗುರುತಿಸಲು ಸಾಧ್ಯವಾಗುತ್ತದೆಯೆಂದು ತಜ್ಞರು ಭಾವಿಸುತ್ತಾರೆ.

ಸ್ತ್ರೀತ್ವದ ವ್ಯಾಖ್ಯಾನದ ಪರಿಮಿತಿಯನ್ನು ಗುರುತಿಸಿದಾಗ ಪ್ರಸಕ್ತವಾಗಿ ನಡೆಯುತ್ತಿರುವ ಪರೀಕ್ಷೆ ಪುರುಷ ಪ್ರಧಾನ ಮೌಲ್ಯಗಳಿಂದ ಕೂಡಿದ್ದು ಬದಲಾಗುತ್ತಿರುವ ಕಾಲಮಾನಕ್ಕೆ ಸ್ಪಂದಿಸುವಂತಿಲ್ಲವೆಂದೆನ್ನಬಹುದು. ಅಸಹಜ ರೀತಿಯಲ್ಲಿ ಅಂದರೆ ಪುರುಷರಿಗೆ ಹೋಲುವ ಬಲಾಢ್ಯತೆಯನ್ನು ಹೊಂದಿದ ಸ್ತ್ರೀಯರನ್ನು ಅನುಮಾನಿಸಲಾಗುತ್ತದೆ. ಇಂತಹ ಸ್ತ್ರೀಯರ ಸಾಹಸ ಸ್ತ್ರೀತ್ವವನ್ನು ಹೊಂದಿದ ಸ್ತ್ರೀಯರೊಂದಿಗೆ ಸ್ಪರ್ಧಿಸಿದರೆ ಪುರುಷರಂತೆ ಬಲಾಢ್ಯರಾದ ಸ್ತ್ರೀಯರಿಗೆ ಗೆಲುವು ಕಟ್ಟಿಟ್ಟ ಬುತ್ತಿಯೆಂದು ಭಾವಿಸಲಾಗುತ್ತದೆ. ಆದರೆ ಇದನ್ನು ಸುಳ್ಳು ಮಾಡಿದ ಸತ್ಯ ಘಟನೆಗಳು ವಿಪುಲವಾಗಿದೆ. ಸಹಜವಾಗಿರುವ ಸ್ತ್ರೀಯರು ಪುರುಷರಂತೆ ಬಲಾಢ್ಯತೆಯನ್ನು ಹೊಂದಿರುವ ಸ್ತ್ರೀ ಆಟಗಾರ್ತಿಯರನ್ನು ಸೋಲಿಸಿದ್ದಾರೆ.

ಪುರುಷರ ಬಲಾಢ್ಯತೆಯ ಮಾನದಂಡವನ್ನು ಸ್ತ್ರೀಯರಿಗೆ ನಿಷೇಧವೆಂಬುದರ ಜೊತೆಯಲ್ಲಿ ಅದೇ

26ನೇ ಪುಟ ನೋಡಿ.

# ಮನಸ್ವಿನಿ

ವೇದ

ಮನಸ್ವಿನಿ ಎಂದರೆ ಶ್ರೀಮಂತರುಗಳಿಗೆ, ಕ್ರೂರಿಗಳಿಗೆ, ಕಳ್ಳಕಾಕರಿಗೆ ಸಿಂಹ ಸ್ವಪ್ನ. ಮನಸ್ವಿನಿ ಯಾರು?, ಎಲ್ಲಿಂದ ಬಂದಳು? — ಯಾರಿಗೂ ತಿಳಿಯದು. ಆದರೆ ಎಲ್ಲಿ ಕಷ್ಟ–ನಷ್ಟಗಳೋ ಅಲ್ಲಿ ಮನಸ್ವಿನಿ, ಎಲ್ಲಿ ನೋವು, ಸಾವೋ ಅಲ್ಲಿ ಮನಸ್ವಿನಿ. ಶ್ವೇತ ಕುದುರೆಯಲ್ಲಿ ಅವಳ ಪ್ರೀತಿಯ ಗಿಣಿಯೊಂದಿಗೆ ಪ್ರತ್ಯಕ್ಷವಾಗುತ್ತಿದ್ದಳು. ಅಲ್ಲಿ ಮಾಡಬೇಕಾದ ಕೆಲಸಗಳನ್ನು ಮಾಡಿ ಮಾಯವಾಗುತ್ತಿದ್ದಳು. ಒಂದು ದಿನ ಯಾದಗಿರಿ ಪರ್ವತದ ತುತ್ತ ತುದಿಯಲ್ಲಿ ಮುಸ್ಸಂಜೆಯ ವೇಳೆ ಪ್ರಕೃತಿಯ ಸೊಬಗನ್ನು ಸವಿಯುತ್ತಿದ್ದಳು. ಅವಳ ಪ್ರೀತಿಯ ಗಿಣಿ ಹಾರಿ ಬಂತು, "ಮಾಯಾ ಕಣಿವೆಯಲ್ಲಿ ಅಪಾಯ, ಅಪಾಯ" ಎಂದು ಗಿಣಿ ನುಡಿಯಿತು. ಮನಸ್ವಿನಿ ತನ್ನ ಕೊರಡನ್ನು ಮತ್ತು ಬಂದೂಕನ್ನು ಹೆಗಲಿಗೇರಿಸಿ ಶ್ವೇತಾಶ್ವವನ್ನೇರಿ ಕುಳಿತಳು. ಗಿಣಿಯು ಬಂದು ಅವಳ ಇನ್ನೊಂದು ಹೆಗಲ ಮೇಲೆ ಕುಳಿತಿತು. ಕುದುರೆ ಶರವೇಗದಿಂದ ಮಾಯಾ ಕಣಿವೆಯನ್ನು ತಲುಪಿತು. ಅಲ್ಲಿ ದಂಪತಿಗಳನ್ನು ಮರಕ್ಕೆ ಕಟ್ಟಿ ಹೊಡೆಯುತ್ತಿದ್ದರು. ಅವರು ನೋವನ್ನು ತಡೆಯಲಾರದೇ ಚೀರುತ್ತಿದ್ದರು. ಮನಸ್ವಿನಿ ಒಂದೇ ಏಟಿಗೆ ತನ್ನ ಕೊರಡನ್ನು ಬೀಸಿ, ಹೊಡೆಯುತ್ತಿದ್ದ ಇಬ್ಬರ ಕೊರಡುಗಳನ್ನು ಸೆಳೆದುಕೊಂಡಳು. ಒಮ್ಮೆಗೆ ಇವಳ ಮೇಲೆ ಅವರಿಬ್ಬರೂ ನುಗ್ಗಿ ಬಂದರ. ಮನಸ್ವಿನಿ ಒಬ್ಬನನ್ನು ಒದ್ದು ಇನ್ನೊಬ್ಬನ ಕುತ್ತಿಗೆಯ ಮೇಲೆ ತನ್ನ ಮುಷ್ಟಿಯಿಂದ ಬಲವಾಗಿ ಗುದ್ದಿದಳು. ನೆಲಕ್ಕುರುಳಿದ ಇಬ್ಬರಲ್ಲಿ ಒಬ್ಬ ಸತ್ತ, ಬಿದ್ದ ಇನ್ನೊಬ್ಬ ಸತ್ತವನನ್ನು ನೋಡಿ ಓಡಿ ಹೋದನು. ಮನಸ್ವಿನಿ ಮರಕ್ಕೆ ಕಟ್ಟಿದ್ದವರ ಕಟ್ಟುಗಳನ್ನ ಬಿಚ್ಚಿ, "ಯಾಕಾಗಿ ನಿಮ್ಮನ್ನು ಅವರು ಹೊಡೆಯುತ್ತಿದ್ದರು?" ಎಂದು ಕೇಳಿದಳು, ಅದಕ್ಕೆ ಅವರು "ಅಮ್ಮ, ನಾವು ಈ ಊರಿನ ಸಾಹುಕಾರನ ಬಳಿ ಸಾಲ ತೆಗೆದು ಕೊಂಡಿದ್ದೆವು, ಅದನ್ನು ತೀರಿಸಲು ಇನ್ನೂ ಗಡುವಿದೆ. ಗಡುವಿನೊಳಗೆ ಸಾಲ ವಾಪಸ್ಸು ಕೊಟ್ಟು ಬಿಡುತ್ತಿದ್ದೆವು, ಆದರೆ ೫೦ ವರ್ಷದ ಸಾಹುಕಾರನಿಗೆ ೧೬ ವರ್ಷದ ನಮ್ಮ ಸುಂದರ ಹೆಣ್ಣು ಮಗಳನ್ನು ಮದುವೆ ಮಾಡಿ ಕೊಡು ಎಂದ. ಒಪ್ಪದಿರುವುದಕ್ಕೆ ಪ್ರಾಣ ಹೋಗುವವರೆಗೆ ಹೊಡೆಯಿರಿ ಎಂದು ಹೀಗೆ ಹೊಡೆಸುತ್ತಿದ್ದ" ಎಂದ ಆ ಇಬ್ಬರೂ ಕಣ್ಣೀರು ಸುರಿಸಿದರು. "ಸರಿ, ನೀವು ಮನೆಗೆ ಹೋಗಿ, ಸಾಹುಕಾರ ನಿಮ್ಮ ತಂಟೆಗೆ ಬರದ ಹಾಗೆ ನಾನು ನೋಡಿಕೊಳ್ಳುತ್ತೇನೆ" ಎಂದು ದಂಪತಿಗಳಿಗೆ ಆಶ್ವಾಸನೆ, ಭರವಸೆ ಇತ್ತು, ಮನಸ್ವಿನಿ ಕುದುರೆಯನ್ನು ಏರಿ ಸಾಹುಕಾರನ ಬೇಟೆಗೆ ಹೊರಡಳು.

ಸಾಹುಕಾರನು ಮನೆಯಲ್ಲಿ ಸೇಂದಿ ಸೇವಿಸುತ್ತಾ ಮೈಗೆ ಎಣ್ಣೆ ತಿಕ್ಕಿಸಿಕೊಳ್ಳುತ್ತಾ ಕುಳಿತಿದ್ದನು. ಮನಸ್ವಿನಿ ಕುದುರೆಯಲ್ಲಿ ಶರವೇಗದಿಂದ ಅಲ್ಲಿಗೆ ಬಂದಾಗ ಸಾಹುಕಾರನ ಕಣ್ಣು ಕುಕ್ಕಿದಂತಾಗಿ "ಎಲೇ ಹೆಣ್ಣೇ ಯಾರು ನೀನು?" ಎಂದು ಸೊಕ್ಕಿನಿಂದ ತೊಡೆ ಬಡಿದುಕೊಳ್ಳುತ್ತಾ ಹೇಳಿದ. "ಒಂದು ನಿಮಿಷ ತಾಳು ಹೇಳುತ್ತೇನೆ" ಎನ್ನುತ್ತಾ ಅವನ ಬಳಿಗೆ ಹಾರಿ ಮನಸ್ವಿನಿ ತನ್ನ ಬಂದೂಕದ ಹಿಂಭಾಗದಿಂದ ಸಾಹುಕಾರನ ಎರಡು ಮೊಣಕಾಲುಗಳನ್ನು ತಿವಿದು ತಿರುಚಿದಳು. "ನಿನಗೆ ಕಂಡ ಕಂಡ ಹೆಣ್ಣುಗಳು ಬೇಕ? ಇನ್ನೆಂದಾದರೂ ನಿನ್ನ ಹೆಂಡತಿಯನ್ನು ಬಿಟ್ಟು ಬೇರೆ ಹೆಣ್ಣುಗಳನ್ನು ನೆನೆಸೀಯೇ! ಜೋಕೆ! ನೆನೆಸಿದೆಯಾದರೆ ನಿನ್ನ ೨ ಕೈಗಳನ್ನೂ ಮುರಿದು ಹಾಕಿ ಬಿಡುತ್ತೇನೆ" ಎಂದು

22ನೇ ಪುಟನೋಡಿ.

# ಮಹಿಳೆ ಮತ್ತು ಸಮಸ್ಯೆಗಳು

ಇದು ವೈಜ್ಞಾನಿಕ ಯುಗ. ಹೊಸ ಹೊಸ ಆವಿಷ್ಕಾರಗಳು ನಡೆಯುತ್ತಿವೆ. ಹೊಸ ಹೊಸ ಬದಲಾವಣೆಗಳಾಗತೊಡಗಿವೆ. ಅವುಗಳಿಗೆ ನಾವು ಹೊಂದಿಕೊಂಡಿದ್ದೇವೆ. ಅದೇ ರೀತಿಯಾಗಿ ಸಮಾಜದಲ್ಲಿ ಸ್ತ್ರೀಯರನ್ನು ನೋಡುವ ದೃಷ್ಟಿಕೋನವೂ ಬದಲಾಗಬೇಕಾಗಿದೆ. ಇಂದು ಮಹಿಳೆಯು ಸಮಾಜದ ಎಲ್ಲ ರಂಗಗಳಲ್ಲೂ ಪ್ರಗತಿ ಹೊಂದಿದ್ದರೂ ಅವಳಿನ್ನೂ ಅಬಲೆ ಎನಿಸಿಕೊಂಡಿದ್ದಾಳೆ. ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ. ಇವುಗಳಲ್ಲಿ ವರದಕ್ಷಿಣೆ, ಬಾಲ್ಯವಿವಾಹ, ವಿಧವಾ ಸಮಸ್ಯೆ, ದೇವದಾಸಿ ಪದ್ಧತಿ ಮುಂತಾದವುಗಳು ನಮ್ಮ ದೇಶದ ಸಮಾಜಕ್ಕೆ ಅರ್ಬುದ ರೋಗವಾಗಿ ಕಾಡುತ್ತಿವೆ.

ವೈದಿಕ ಯುಗದಲ್ಲಿ ಮಹಿಳೆಯರಿಗೆ ಗೌರವದ ಸ್ಥಾನಮಾನಗಳಿದ್ದವು. ಪುರುಷರಂತೆ ವಿದ್ಯಾಭ್ಯಾಸದಲ್ಲಿ ಸಮಾನವಾದ ಅವಕಾಶವನ್ನು ಪಡೆದಿದ್ದರು. ಕ್ರಮೇಣವಾಗಿ ಅವಳ ಸ್ಥಾನಮಾನ ಬದಲಾಗತೊಡಗಿತು. ಸಂಸಾರದಲ್ಲಿ ಒಂದು ಅಲಂಕಾರದ ವಸ್ತುವಾದಳು. ಹೆಣ್ಣುಮಕ್ಕಳು ಎಲ್ಲ ಕಷ್ಟಗಳಿಗೂ ಮೂಲವೆಂದೂ, ಗಂಡುಮಗನೊಬ್ಬನೇ ಸಂಸಾರದ ಆಶಾಜ್ಯೋತಿ ಎಂದು ಐತರೇಯ ಬ್ರಾಹ್ಮಣವು ಹೇಳಿರುವುದನ್ನು ನೋಡಿದರೆ ಹೆಣ್ಣುಮಕ್ಕಳನ್ನು ಪಡೆಯಲು ಇಚ್ಛಿಸುತ್ತಿರಲಿಲ್ಲವೆಂಬುದನ್ನು ಮನಗಾಣಬಹುದು. ಈಗಲೂ ಕೂಡ ಅಂಥ ಪರಿಸ್ಥಿತಿಯಿರುವುದನ್ನು ಸಮಾಜದಲ್ಲಿ ನೋಡುತ್ತೇವೆ. ಕಾರಣ ಹೆಣ್ಣುಮಕ್ಕಳನ್ನು ಪೋಷಿಸಿ, ಯೋಗ್ಯವರನನ್ನು ಹುಡುಕಿ. ಕೇಳಿದಷ್ಟು ಹಣ ಕೊಟ್ಟು ಮದುವೆಮಾಡಿ ಬೇರೆ ಮನೆಗೆ ಕಳಿಸಬೇಕಲ್ಲ. ಅದಕ್ಕಾಗಿಯೇ ಈಗಲೂ ಕೂಡ ಗಂಡುಮಕ್ಕಳನ್ನು ಪಡೆಯುವುದಕ್ಕಾಗಿ ಹರಕೆಗಳನ್ನು ಹೊರುವುದನ್ನು ನೋಡಬಹುದು. ಸ್ತ್ರೀಯರಿಗೆ ಅನೇಕ ಸಮಸ್ಯೆಗಳಿವೆ. ಸ್ತ್ರೀಯರು ಪುರುಷರ ಸಮಾನರು. ಸ್ತ್ರೀಯರಿಗೆ ಸ್ವಾತಂತ್ರ್ಯವಿದೆ ಮುಂತಾದ ಕೂಗುಗಳು ಕೇಳುತ್ತಿದ್ದರೂ ಇಂದಿಗೂ ಅವಳ ಸಮಸ್ಯೆಗಳಿಗೆ ಪರಿಹಾರ ಸಿಕ್ಕಿಲ್ಲ. ವರದಕ್ಷಿಣೆಯಂಥ ಭೀಕರ ಸಮಸ್ಯೆಗಳು ಎಷ್ಟೋ ಜನ ಮಹಿಳೆಯರನ್ನು ಬಲಿತೆಗೆದುಕೊಂಡಿವೆ. ಪ್ರಾಚೀನಕಾಲದಲ್ಲಿ ಹೆಣ್ಣುಮಕ್ಕಳ ಮದುವೆಯು ಕಷ್ಟವಾಗಿರಲಿಲ್ಲ. ಗಂಡಿನವರು ಕನ್ಯಾಶುಲ್ಕವನ್ನು ತೆತ್ತು ಮದುವೆಯನ್ನು ಮಾಡಿಕೊಳ್ಳುತ್ತಿದ್ದರು. ಈಗಲೂ ಕೂಡ ಕೆಳವರ್ಗದ ಜನರಲ್ಲಿ ಇಂಥ ಪದ್ಧತಿ ಇರುವುದನ್ನು ನೋಡಬಹುದು. ಮೊದಲಿನ ಕಾಲದಲ್ಲಿ ಮದುವೆಯಾದ ಮೇಲೆ ಅಳಿಯನಿಗೆ ಉಡುಗೊರೆಗಳನ್ನು ಕೊಡುತ್ತಿದ್ದರು. ಈ ಉಡುಗೊರೆ ಕೊಡುವುದೇ ವರದಕ್ಷಿಣೆಯ ರೂಪದಲ್ಲಿ ಸಾಮಾನುಗಳನ್ನು ಕೊಡಲು ಕಾರಣವಾಗಿರಬೇಕು. ಮೊದಲು ವಧುವಿನ ತಂದೆತಾಯಿಗಳು ಸ್ವ-ಇಚ್ಛೆಯಿಂದ, ಸಂತೋಷದಿಂದ ತಮ್ಮ ಕೈಲಾದಷ್ಟು ಉಡುಗೊರೆಗಳನ್ನು ಮಗಳಿಗೆ ಕೊಡುತ್ತಿದ್ದರು. ಆದರೆ ಈಗ ವರನ ಬೇಡಿಕೆಗಳನ್ನು ಪೂರೈಸುವುದಕ್ಕಾಗಿ ತಂದೆತಾಯಿಗಳು ಸಾಲವನ್ನು ಕೂಡ ಮಾಡಲು ಹಿಂಜರಿಯುವುದಿಲ್ಲ. ಹಣವನ್ನು ಕೊಟ್ಟು ಮಗಳ ಸಂತೋಷವನ್ನು ಕೊಳ್ಳುತ್ತಾರೆ. ಹಣದ ದಾಹವಿದ್ದ ಅಳಿಯ ತಮ್ಮ ಮಗಳನ್ನು ಸುಖವಾಗಿ ಇಡಬಲ್ಲನೆಂದು ತಿಳಿದು ತಮ್ಮ ಸಾಮರ್ಥ್ಯ ಮೀರಿ ವರದಕ್ಷಿಣೆಯನ್ನು ಕೊಡುತ್ತಾರೆ. ಹಣದ ದಾಹವಿದ್ದ ಗಂಡು ಹೆಣ್ಣನ್ನು ಸುಖವಾಗಿ ನೋಡಿಕೊಳ್ಳಬಲ್ಲನೆ ? ಇದರ ಬಗ್ಗೆ ತಂದೆತಾಯಿ ವಿಚಾರ ಮಾಡಬೇಕಾಗುತ್ತದೆ. ವರದಕ್ಷಿಣೆಯೆಂಬ ಭೂತ ಕಲಿಯದವರಿಗಿಂತ ಕಲಿತವರೆಂಬ ಸುಶಿಕ್ಷಿತರನ್ನೇ ಹಿಡಿದಿದೆ. ಡಾಕ್ಟರ್, ಇಂಜಿನಿಯರ್ ಮುಂತಾದವರು ತಮ್ಮ ಸ್ಥಾನಕ್ಕೆ ತಕ್ಕಂತೆ ಮಾವನಾದವನಿಂದ ಪರೋಪಚಾರ ಮಾಡಿಸಿಕೊಳ್ಳುತ್ತಾರೆ. ಇಂದಿನ ಯುವತಿಯರೂ ಕೂಡ ತಮಗೆ ಡಾಕ್ಟರ್, ಇಂಜನೀಯರೇ ಬೇಕೆಂದು ಪಟ್ಟುಹಿಡಿದು ಕುಳಿತರೆ ತಂದೆತಾಯಿಗಳು ವಿಧಿಯಿಲ್ಲದೆ ವರಶುಲ್ಕವನ್ನು ತೆತ್ತು ಮದುವೆಯನ್ನು ಮಾಡಿಕೊಡಬೇಕಾಗುತ್ತದೆ. ಅದೇ ರೀತಿಯಾಗಿ ಇಂದು ಹೆಣ್ಣಿಗೆ ಹೆಣ್ಣೇ ಶತ್ರುವಾಗಿದ್ದಾಳೆ. ಅತ್ತೆಗೊಂದು ಕಾಲ ಸೊಸೆಗೊಂದು ಕಾಲ ಎನ್ನುವಂತೆ ತಾವೂ ವರದಕ್ಷಿಣೆಯನ್ನು ತೆರಲು ಕಷ್ಟ

ಪಟ್ಟಿರುವುದು ಗೊತ್ತಿದ್ದೂ ಕೂಡ ತಮ್ಮ ಮಗ ದೊಡ್ಡವನಾದ ಕೂಡಲೇ ವರದಕ್ಷಿಣೆ ಸಾಕಷ್ಟು ಕೊಡುವ ಕನ್ಯೆಯನ್ನೇ ಆರಿಸುತ್ತಾರೆ. ಅತ್ತೆಯಾದವಳು ಹೆಣ್ಣಿನವರಿಂದ ಹಣವನ್ನು ಪಡೆದು ಆಭರಣಗಳನ್ನು ಮಾಡಿಸಿಕೊಂಡು ಹಾಕಿಕೊಳ್ಳುವ ಸಂದರ್ಭವನ್ನು ಕಾಯುತ್ತಿರುತ್ತಾಳೆ. ಉಚಿತವಾಗಿ ಆಭರಣಗಳನ್ನು ಧರಿಸುವ ಸುಯೋಗ ಬಂದರೆ ಇಲ್ಲವೆಂದಾಳೆಯೆ ? ವರದಕ್ಷಿಣೆಯನ್ನು ಕೊಟ್ಟು ಮದುವೆಯಾಗುವ ಹೆಣ್ಣು ಇಂಥ ಸಂದರ್ಭದಲ್ಲಿ ಯೋಚಿಸಬೇಕು. ಭಾರತದಲ್ಲಿ ವರದಕ್ಷಿಣೆಯಂಥ ಸಮಸ್ಯೆ ಬುಡಸಮೇತ ಕೀಳಬೇಕಾದರೆ ಇಲ್ಲಿಯ ಮಹಿಳೆಯರು ಒಂದಾಗಿ ಪ್ರತಿಭಟಿಸಬೇಕು. ಧನಪಿಶಾಚಿಗಳಿಗೆ ತಕ್ಕ ಪಾಠವನ್ನು ಕಲಿಸಬೇಕು.

ಅದರಂತೆ ವಿಧವಾ ಸಮಸ್ಯೆಯೂ ಕೂಡ ಸಮಾಜ ಸುಧಾರಕರು ವಿಧವೆಯ ಪುನರ್ವಿವಾಹಕ್ಕೆ ಪ್ರೋತ್ಸಾಹ ಕೊಟ್ಟಿದ್ದರೂ ಇಂದು ಯಾರು ವಿಧವೆಯರನ್ನು ಮದುವೆ ಮಾಡಿಕೊಳ್ಳಲು ಒಪ್ಪುವುದಿಲ್ಲ. ಕೆಲವೊಂದು ಪಂಗಡಗಳಲ್ಲಿ ವಿಧವೆಯ ಸ್ಥಾನ ಅತ್ಯಂತ ನಿಕೃಷ್ಟವಾಗಿದೆ. ಪುರುಷನು ಹೆಂಡತಿ ಸತ್ತ ಮೂರು ತಿಂಗಳೇ ಮದುವೆಯಾಗಬಹುದು. ಆದರೆ ವಿಧವೆ ಮತ್ತೊಂದು ಮದುವೆ ಮಾಡಿಕೊಂಡರೆ ಸಮಾಜವು ಅವಳನ್ನು ಹಿಯಾಳಿಸುವುದನ್ನು ಕಾಣಬಹುದು. ಇಂಥ ಅನಿಷ್ಟ ಪದ್ಧತಿಗಳನ್ನು ವಿರೋಧಿಸುವ ಸ್ತ್ರೀಯು ಸಮಾಜದ ದೃಷ್ಟಿಯಲ್ಲಿ ಉದ್ಧಟ ಸ್ತ್ರೀ ಎನಿಸಿಕೊಳ್ಳುತ್ತಾಳೆ.

ಬಾಲ್ಯವಿವಾಹವು ಪಟ್ಟಣದಲ್ಲಿ ಕಡಿಮೆಯಾದಿದ್ದಗೂ ಹಳ್ಳಿಯಲ್ಲಿ ಇನ್ನೂ ಇದೆ. ಇದರಿಂದ ಅನೇಕ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಆದ್ದರಿಂದ ಹಳ್ಳಿಯಲ್ಲಿ ಜನರು ಜಾಗೃತರಾಗುವದು ಅವಶ್ಯವಾಗಿದೆ ಕೊನೆಯದಾಗಿ ದೇವದಾಸಿಯಂಥ ಪದ್ಧತಿಯು ಕೆಳವರ್ಗದ ಹೆಣ್ಣುಮಕ್ಕಳನ್ನು ಶೋಷಿಸುವಂಥ ಮಾರ್ಗವಾಗಿದೆ. ಇದರ ಬಗ್ಗೆ ಅವರಿಗೆ ಸರಿಯಾದ ಅರಿವು ಮೂಡಿಸಬೇಕು. ಮೂಢನಂಬಿಕೆಯನ್ನು ಹೋಗಲಾಡಿಸಬೇಕು.

ವರದಕ್ಷಿಣೆ, ವಿಧವಾ ಸಮಸ್ಯೆ, ಬಾಲ್ಯವಿವಾಹ, ದೇವದಾಸಿಯಂತಹ ಅನೇಕ ಸಮಸ್ಯೆಗಳನ್ನು ತೊಡೆದು ಹಾಕಲು ಅನೇಕರು ಪ್ರಯತ್ನಪಟ್ಟಿದ್ದಾರೆ. ಆದರೂ ಕೂಡ ಮಹಿಳೆಯರು ಇಂಥ ಸಮಸ್ಯೆಗಳ ವಿಷವರ್ತುಲದಿಂದ ಹೊರಬರದೆ ಒದ್ದಾಡುತ್ತಿದ್ದಾರೆ. ಇದು ದುಃಖದಾಯಕ ಸಂಗತಿ. ಸಮಸ್ಯೆಗಳನ್ನು ಪರಿಹರಿಸಲು ಸರಕಾರವು ಕಾನೂನುಗಳನ್ನು ಮಾಡಿದ್ದರೂ ಅದರಿಂದ ಏನೂ ಉಪಯೋಗವಾಗಿಲ್ಲ. ಅದಕ್ಕೆ ಜನರ ಸಹಕಾರವೂ ಬೇಕು. ಅಂದಾಗ ಮಾತ್ರ ಆರೋಗ್ಯಕಾರಿಯಾದ ಸಮಾಜವು ನಿರ್ಮಾಣವಾದೀತು.

ರಾಜಶ್ರೀ ಹಿರೇಮಠ
ಬೆಳಗಾವಿ

---

## ಒಂದು ಅನಿಸಿಕೆ

ಮಾರ್ಚ್ 1990ರ 'ಮಾನಸ' ದ ಹೆಣ್ಣು ಶಿಶುವಿನ ವರ್ಷದ ನೆನಪಿಗಾಗಿ...... "ಬಾಲಕಿಯರ ಮೇಲಿನ ಲೈಂಗಿಕ ಹಿಂಸೆ" ಓದುತ್ತಾ ಕರುಳು ಕಿವುಚಿದಷ್ಟು ಬಾಧೆಯಾಯಿತು. ಎಳೆಯ ಬಾಲಕಿಯರ ಮೇಲಿನ ಲೈಂಗಿಕ ಹಿಂಸೆಗೆ ಕುಟುಂಬದ ಆಶ್ರಯವಿಲ್ಲದ ಬೀದಿಮಕ್ಕಳು (ಹಳ ಪ್ಲಾಸ್ಟಿಕ್, ಪೇಪರು, ಗಾಜು, ತಗಡು ಆರಿಸುವ) ಹೆಚ್ಚಾಗಿ ಒಳಗಾಗುವುದು ಸರ್ವೆ ಸಾಮಾನ್ಯವೆನಿಸುತ್ತದೆ. ಒಮ್ಮೆ ನನ್ನ ಬೀದಿ ಬದಿಯ ತೊಟ್ಟಿಗಳಲ್ಲಿ ಹಳೆ ವಸ್ತುಗಳನ್ನು ಆರಿಸಲು ಬರುತ್ತಿದ್ದ ಪೇಟೆ ಬದಿ, ಕೇರಿಬಾಲೆ ಆಗಾಗ ಏನಾದರೂ ತಿಂಡಿಕೊಟ್ಟು ಮಾತಾಡಿಸುವ ಪರಿಚಯವಿದ್ದ ಚಿಕ್ಕ ಹುಡುಗಿ ಕೃಷ್ಣಿ, ತೊಡೆ ಉಳುಕಿದಂತೆ ನಡೆದು ಹೋಗುತ್ತಿರಲು "ಯಾಕೆ ಉಸ್ಗಿ ಹಿಂಗ ನಡೀತಿ?" ಅಂದ್ರೆ, "ತೊಡೇಲಿ ಕುರು ಎದ್ದೈತೆ ಕಣಕ್ಕ" ಅಂದ್ಲು. ಹಾಗಂದಾಗ ಅವಳ ಮುಖ ಹಿಂಡ್ಹಿದಂತಾದ್ದು ಸತ್ಯ ಹೊಳೆದಂತಾಗಿ, ಅಯ್ಯೋ ಎಂದು ಒರಲಿತು ಮನಸ್ಸು. ದಿನಾ ಚೂರು ಪಾರು ಗಳಿಕೆಮಾಡಿ, ಕತ್ತಲಾದ ಮೇಲೆ ಕೇರಿ ಸೇರುತ್ತಿದ್ದ ಅವಳು ದಾರಿ ಮಧ್ಯದ ತೋಪುಗಳ ನಡ್ವೆ ಯಾವ ದುರಾತ್ಮ ಪಶುವಿನ ಹಸಿವಿಗೆ ಬಲಿಯಾದಳೋ ಅಯ್ಯೋ, ಹೆಣ್ಣು ಜನ್ಮದ ಕರಾಳ ವಿಧಿಯೇ ಎಂದು ಗೋಳಿಡುತ್ತದೆ ಹೃದಯ. ತುಂಬಾ ಪ್ರಮುಖ ಅಂಶದತ್ತ ಹೆಣ್ಣ ಶೋಷಣೆಯ ಗಂಭೀರ ಚಿಂತನೆಯನ್ನು ಮುಂದಿಡುತ್ತದೆ, 'ಮಾನಸ' ದ ಲೇಖನ.

ಉತ್ತನೂರು ರಾಜಮ್ಮ ವಿ. ಶೆಟ್ಟಿ

ಹೇಳಿ ಕ್ಷಣ ಮಾತ್ರದಲ್ಲಿ ಕುದುರೆ ಏರಿ ಮಿಂಚಿ ಮಾಯವಾದಳು.

ಇನ್ನೊಮ್ಮೆ ಊರಿಗೆ ದರೋಡೆಕಾರರು ಬಂದರು. ಗಿಣಿಯ ಮೂಲಕ ಅವರ ಇರವನ್ನು ಪತ್ತೆ ಹಚ್ಚಿದ ಮನಸ್ವಿನಿ ಊರಾಚೆ ಅಡಗಿ ತನ್ನ ಬಂದೂಕಿನಿಂದ ಎಲ್ಲರನ್ನೂ ಕೊಂದು, ಅವರ ಹೆಣಗಳನ್ನು ಪೊಲೀಸ್ ಠಾಣೆಗೆ ತಲುಪಿಸಿದಳು. ಕಡು ಬಡವರಿಗೆ "ಮನಸ್ವಿನಿ" ನೆನೆಸಿದಾಗ ಪ್ರತ್ಯಕ್ಷವಾಗುವ ದೇವತೆಯಾಗಿದ್ದಳು. ಅವರಿಗೆ ಹಣ ಸಹಾಯ ಮಾಡುತ್ತಿದ್ದಳು.

ಶ್ರೀಮಂತರಿಗೆ, ಕಳ್ಳಕಾಕರಿಗೆ ಹೀಗೆ ಮನಸ್ವಿನಿ ದುಃಸ್ವಪ್ನವಾಗಿದ್ದಳು. ಇದನ್ನು ಸಹಿಸದ ಕೆಲವರು ಒಂದು ದಿನ ಅವಳನ್ನು ಹಿಡಿದು ಕೊಂದುಹಾಕಲು ತೀರ್ಮಾನಿಸಿದರು. ಅವಳನ್ನು ಹುಡುಕುತ್ತಾ ಯಾದ ಗಿರಿ ಬೆಟ್ಟವನ್ನು ಹತ್ತ ತೊಡಗಿದರು. ಗಿಣಿಗೆ ಈ ಸಮಾಚಾರ ತಿಳಿದುಬಂತು. ಅದು ತನ್ನ ಒಡತಿಗೆ ವಿಷಯ ಮುಟ್ಟಿಸಿತು. ವಿಷಯ ತಿಳಿದ ಮನಸ್ವಿನಿಯ ಮನಸ್ಸು ಕುದಿಯಿತು. ಬಂದೂಕನ್ನು ಎತ್ತಿಕೊಂಡು ಆಚೆ ನಡೆದಾಗ ಗಿಣಿ ಮಾಮೂಲಿಯಂತೆ ಅವಳ ಹೆಗಲ ಮೇಲೆ ಕುಳಿತುಕೊಂಡಿತು. ಮನಸ್ವಿನಿ ಬಿರುಗಾಳಿಯಂತೆ ಬೆಟ್ಟ ಹತ್ತಿ ಬರುತ್ತಿರುವವರ ಮೇಲೆ ದಾಳಿ ಮಾಡಿದಳು. ಅವರನ್ನೆಲ್ಲ ನೋಡಿ ಅವಳು ರುದ್ರಕಾಳಿಯಾದಳು. ಕೆಲವರನ್ನು ಬಂದೂಕಿನಿಂದ ಕೊಂದಳು. ಕೆಲವರಿಗೆ ತನ್ನ ಕೈಚಳಕದಿಂದಲೆ ಮೋಕ್ಷ ಕಾಣಿಸಿದಳು. ಅವರಿಗೆ ಇವಳು ಹೆಣ್ಣೋ, ಪಿಶಾಚಿಯೋ, ಮೋಹಿನಿಯೋ ಎನಿಸತೊಡಗಿತು. ಗಿಣಿ ಎದುರಿಗೆ ಬಂದವರ ಕಣ್ಣು ನೇರವಾಗಿ ಕುಕ್ಕಿ ತನ್ನ ಒಡತಿಗೆ ಸಹಾಯ ಮಾಡುತ್ತಿತ್ತು. ಇದನ್ನು ಗಮನಿಸಿದ ಕೇಡಿಯೊಬ್ಬ ಹಿಂದಿನಿಂದ ಮೆಲ್ಲಗೆ ಬಂದು ಭುಜದ ಮೇಲೆ ಕುಳಿತ ಗಿಣಿಗೆ ಕತ್ತಿ ಬೀಸಿದ. "ಮನಸ್ವಿನಿ ಕಾಪಾಡಿಕೋ" ಎನ್ನುತ್ತಾ ಗಿಣಿ ಚೆಂಡು ಹೊಡೆದ ಹಾಗೆ ಕೆಳಗೆ ಬಿತ್ತು. "ಏನಾಯಿತು" ಎನ್ನುವಷ್ಟರಲ್ಲಿ ಮನಸ್ವಿನಿ ಗಿಣಿಯ ಕೊಂದವನ ರುಂಡದೊಂದಿಗೆ ತನ್ನ ಮುದ್ದು ಗಿಣಿಯ ತಲೆಯ ಹತ್ತಿರ ಕುಳಿತಳು. ಆಕೆಯ ಕಣ್ಣಿನಿಂದ ನೀರು ಕತ್ತಿಯಿಂದ ರಕ್ತ ಸುರಿಯುತ್ತಿತ್ತು [illegible] ಒದರತೊಡಗಿತು: "ನೊಂದಿತೇನೋ" ಎಂದು ಅದನ್ನ ತೊಡೆಯ ಮೇಲಿಟ್ಟುಕೊಂಡು ಬಂದೂಕು, ಕತ್ತಿ ಕೆಳಗಿಟ್ಟಾಗ ಹಿಂದಿನಿಂದ ಮತ್ತೊಬ್ಬ ಬಂದು ಆಕೆಯ ಹೊಟ್ಟೆಗೆ ತಿವಿದ. ಗಿಣಿಯನ್ನು ತೊಡೆ ಮೇಲಿಟ್ಟುಕೊಂಡು "ಹಾ!" ಎನ್ನುತ್ತಾ ಮನಸ್ವಿನಿ ಕೊನೆಯುಸಿರೆಳೆದಳು. ಈ ಮೋಸವನ್ನೇ ಕುರಿತು ಹೇಳಲು ತಲೆಯಾಡಿಸುತ್ತಿದ್ದ ಗಿಣಿಯೂ ತನ್ನ ಒಡತಿಯೊಂದಿಗೇ ಕೊನೆಯುಸಿರೆಳೆಯಿತು.

ಮರುದಿನ ಮನಸ್ವಿನಿ ಸಾವಿಗೆ ಕಣ್ಣೀರುಗೆರೆದ ಊರಿನ ಬಡವರು ಭುಜದ ಮೇಲೆ ಗಿಣಿಯ ಚಿತ್ರವಿರುವ ಮನಸ್ವಿನಿಯ ಮೂರ್ತಿಯೊಂದನ್ನು ತಮ್ಮ ಊರಿನಲ್ಲಿ ಸ್ಥಾಪಿಸಿದರು.

---

## ಬದುಕು

ಹೊಕ್ಕಳು ಬಳ್ಳಿ ಕತ್ತರಿಸಿ
ಕರುಳ ಕುಡಿ ಚಿಗುರಿಸುವ
ಆಸೆ ಹೊತ್ತ
ನನಗೆ[illegible]- ನಿಮಗೆ
ಬೇರು ಬಿಟ್ಟ ಸುಂದರ ಕನಸುಗಳ
ಕತ್ತರಿಸಿ – ಅಂಟಿಸುವ ನೋವ ಕೆಲಸ
ನಮ್ಮ ಒಡಲಾಳವನ್ನರಿಯಲು
ಮೂರ್ತಿ – ಅಮೂರ್ತಿಗಳ
ಶಂಕೆ - ಆಶಂಕೆಗಳ ಭಾವ ಮೀರಿ
ನಯನಗಳ ಮೊಗ್ಗು ಬಿಡಿಸಲು
ಗುಲಾಬಿ ಪಕ್ಕಳೆಗಳ ಅರಳಿಸಲು
ಕುದುರೆ ಹೆಜ್ಜೆಯ ಪತ್ತೆ ಹಚ್ಚಲು
ಕೈ - ಚಾಚಿದಾಗ
ತೀವದ ಉಸುಕು ಮರಳಲ್ಲಿ
ದಕ್ಕಿದ್ದ - ಬಾಳಿಲ್ಲ
ಮಕ್ಕಳು ಕಟ್ಟಿದ ಮರಳುಗೂಡು
ಅವಳ – ಅವನ ನಡುವೆ
ಶೃತಿ ಹಿಡಿದ ಆತ್ಮವಿಲ್ಲ
ಮನಸ್ಸು ಬರಿದು
ಬರಿದೋ – ಬರಿದು

ನಾವು,
ಮುರಿದ ಏಣಿಯ ಪಾವಟಿಕೆಯಲ್ಲಿ ನಿಂತು
ಕಡಲ ಮೊರೆತ ಕೇಳಬೇಕು
ನವಿಲು ಗರಿಗಳ ಕಣ್ಣು ಎಣಿಸಬೇಕು.

# ಅಕ್ಕ ಪಕ್ಕ

ಹೆಂಡತಿ ಸತ್ತ ಗಂಡನಿಗೆ ಹೆಣ್ಣು ಕೊಡಲು ಯಾರಾದರೂ ಹಿಂದೆ ಮುಂದೆ ನೋಡ್ತಾರಾ? ಹುಡುಗಿಯರಲ್ಲೂ ನಾವು ಅಂಥಾದ್ದೆ ಉದಾರತೆಯನ್ನು ತೋರಿದರೆ ತಪ್ಪೇನು?

ಶಿರೀಷ್

ವಿಧವೆಯಾದ ಅತ್ತಿಗೆಯನ್ನು ವಿವಾಹವಾದ ಯುವಕ

ಅವಿವಾಹ ತಾಯ್ತನದ ವ್ಯವಸ್ಥೆ ಏರ್ಪಟ್ಟಾಗ ಮೊದಲು ಪೆಟ್ಟು ಬೀಳುವುದು ಪುರುಷನಿಗೆ. ಆಗ ಪುರುಷ ತನ್ನ ಸ್ಥಾನಮಾನಗಳತ್ತ ಮರುಚಿಂತಿಸ ಬೇಕಾಗುತ್ತದೆ.

ಉಷಾ ಎಂ.

ಮದುವೆಯಾಗುವ ಮುನ್ನವೇ ತಾಯಿಯಾಗುವ ಹೆಣ್ಣಿಗೆ ನಮ್ಮ ಸಮಾಜದಲ್ಲಿ ಸ್ಥಾನದ ಮಾತಿರಲಿ, ಆವಳು ಆ ರೀತಿಯ ಸ್ಥಿತಿಯಲ್ಲಿ ಇದ್ದಾಳೆ ಎನ್ನುವ ಸುಳಿವು ಸಿಕ್ಕಿದರೆ ಸಾಕು, ಅವಳಿಗೆ ಕುಷ್ಠರೋಗ ಹಿಡಿದಿದೆ ಅನ್ನೋ ತರಹ ಅವಳನ್ನು ಮೇಲಿನಿಂದ ಕೆಳಗಿನವರೆಗೂ ನೋಡುತ್ತಾರೆ.

ಕೆ. ಸುರಯ್ಯಾ ಭಾನು
ಬೈಂದೂರು

ಸ್ವಾತಂತ್ರ್ಯ ಬಂದು 40 ವರ್ಷಗಳಾಯಿತು. ನಮ್ಮ ಹಳ್ಳಿಗಳಲ್ಲಿ ಬೇಲಿ ಪಕ್ಕವನ್ನು ಅವಲಂಬಿಸುವ ಪರಿಸ್ಥಿತಿ ತಪ್ಪಲಿಲ್ಲ.

ವಾಟಾಳ್ ನಾಗರಾಜ್
ವಿಧಾನ ಸಭೆ ಸದಸ್ಯ
(ಹಳ್ಳಿಗಳಲ್ಲಿ ಶೌಚಾಲಯವನ್ನು ನಿರ್ಮಿಸುವುದನ್ನು ಕುರಿತು)

ಭಾರತೀಯ ಗಂಡಸರು ಅವರು ಮಧ್ಯಮ ಶ್ರೀಮಂತ, ಕೆಳವರ್ಗದ ಯಾವುದೇ ವರ್ಗಕ್ಕೆ ಸೇರಿದ ಗಂಡಸರಾಗಿರಲಿ ಅವರು ಸ್ತ್ರೀಯರನ್ನು ನಿದ್ದೆಗುಳಿಗೆಗಳ ಹಾಗೆ ಉಪಯೋಗಿಸುತ್ತಾರೆ.

ಪ್ರಕಾಶ್ ಕೊಠಾರಿ
ಪ್ರಖ್ಯಾತ ವೈದ್ಯ.

ನಮ್ಮದು ವಿರೋಧಾಭಾಸಗಳ ಸಂಸ್ಕೃತಿ. ಯಾರನ್ನು ಸುಡಲು ಪ್ರಯತ್ನಿಸಿದೆವೋ ಆ ದೇವತೆಯನ್ನು ಪೂಜಿಸುತ್ತೇವೆ.

ಸುನಿಲ್‌ದತ್
ನಟ, ನಿರ್ಮಾಪಕ,
ಸಂಸತ್ ಸದಸ್ಯ.

ಈಗಿನ ಮಹಿಳಾ ಸರ್ಕಾರದಿಂದ ಮಹಿಳೆಯರಲ್ಲಿ ಒಂದು ರೀತಿಯ ನಂಬಿಕೆ ಉಂಟಾಗಿದೆ. ನಾನು ಕಂಡಂತೆ ಹಲವಾರು ಮಹಿಳೆಯರು ತಮ್ಮ ಗಂಡಂದಿರಿಗೆ ಹಾಸ್ಯದಿಂದ "ಇದು ಮಹಿಳಾ ಸರ್ಕಾರ. ಆದ್ದರಿಂದ ನಾವೇ ಈಗ ಯಜಮಾನರು" ಎನ್ನುವುದು. ಇದರಿಂದಾಗಿ ನಾವು ಅವರಲ್ಲಿ ಮೂಡಿರುವ ಒಂದು ಹೊಸ ಭರವಸೆಯನ್ನೂ ಗಮನಿಸಬಹುದು.

ಶಾಹೀದ್ ಜಬೀನ್
ಪಾಕಿಸ್ತಾನದ ಪೀಪಲ್ಸ್ ಪಾರ್ಟಿಯ
ಮಹಿಳಾ ದಳದ ಕಾರ್ಯದರ್ಶಿ

ದುಡಿಯುವ ಸ್ಥಳಗಳಲ್ಲಿ ಮಹಿಳೆಯರ ಮೇಲೆ ನಡೆಯುವ ಲೈಂಗಿಕ ದಬ್ಬಾಳಿಕೆ ನಿಲ್ಲಬೇಕು. ಎಲ್ಲ ರಂಗಗಳಲ್ಲೂ ಸಮಾನ ಅವಕಾಶ, ಸಮಾನ ವೇತನ. ಮಕ್ಕಳ ಲಾಲನೆ — ಪಾಲನೆಗಾಗಿ ಸರ್ಕಾರದಿಂದ ದಾದಿಯರ ಕೇಂದ್ರ ಹಾಗೂ ಶಿಶುಗಳ ಕೇಂದ್ರ ವ್ಯವಸ್ಥೆಯಾಗಬೇಕು.

"ದುಡಿಯೋರ ಹೋರಾಟ" ಪತ್ರಿಕೆಯ ನಿಲುವು.

"ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರ ಮೇಲೆ ಹೆಚ್ಚುತ್ತಿರುವ ದೌರ್ಜನ್ಯ ತಡೆಯಲು ಸಂಘಟಿತ, ಸುಶಿಕ್ಷಿತ ಮಹಿಳೆಯರು ಮುಂದಾಗಬೇಕು. ಸಾಮಾಜಿಕ ಶಿಕ್ಷಣ ಇಲ್ಲದ ಶೋಷಿತ ಮಹಿಳೆಯರಿಗೆ ಬೆಂಬಲ ನೀಡಲು ಕಾರ್ಯಕ್ರಮ ರೂಪಿಸಿಕೊಳ್ಳಬೇಕು"

ಎಂ ವೀರಪ್ಪ ಮೊಯಿಲಿ
ರಾಜ್ಯದ ಕಾನೂನು ಹಾಗೂ ಸಂಸದೀಯ
ವ್ಯವಹಾರಗಳ ಸಚಿವ.

ಹೆಣ್ಣು ಶಿಶುವಿನ ವರ್ಷದ ನೆನಪಿಗಾಗಿ......

# ಸ್ತ್ರೀ ಜನ್ಮ ಶಾಪವೆ?

ತಾವು ಸತ್ತ ಮೇಲೆ ತಮಗೆ ಸ್ವರ್ಗದಲ್ಲಿ ಖಂಡಿತವಾಗಿ ಸೀಟು ಕೊಡಿಸುವರೆಂಬುದಕ್ಕಾಗಿ ಪುತ್ರಸಂತಾನವನ್ನೇ ಅಪೇಕ್ಷಿಸುವುದು ಭಾರತೀಯರ ಸಂಪ್ರದಾಯ. ಹೆಣ್ಣುಮಕ್ಕಳು ಹುಟ್ಟಿದರೆ ಅವರ ವಿದ್ಯಾಭ್ಯಾಸ, ಪೋಷಣೆ, ಮದುವೆ ........ ಇವೆಲ್ಲ ಖರ್ಚಿನ ಬಾಬತ್ತು ಆದ ಕಾರಣ ಚೀನಾ, ಕೊರಿಯಾ....ದಂತಹ ದೇಶಗಳಲ್ಲೂ ಗಂಡುಮಕ್ಕಳನ್ನೇ ಬಯಸುತ್ತಾರೆ. ಜನಸಂಖ್ಯಾ ಬಾಹುಳ್ಯವಿರುವ ಚೀನಾದಲ್ಲಿ ದಂಪತಿಗಳು ಒಂದೇ ಮಗು ಪಡೆಯುವ ಅವಕಾಶವಿರುವುದರಿಂದ ಅವರು ಆದಷ್ಟು — ಆ ಒಂದು ಮಗು ಗಂಡೇ ಆಗಲಿ ಎಂದು ಬಯಸುತ್ತಾರೆ. ಹೆಣ್ಣು ಹುಟ್ಟಿದರೂ ಅದರ ಜೀವನದ ಇತಿಶ್ರೀ ಮಾಡಲು ಅನೇಕ ವಿಧಾನಗಳು ಗೊತ್ತು. ಈ ನರಮೇಧ ತಪ್ಪಿಸಲು ಎಂಥಹ ಕಾನೂನನ್ನೇ ಜಾರಿಗೆತಂದರೂ ತೆರೆಮರೆಯಲ್ಲಿ ನಡೆಯುವುದೆಲ್ಲ ಸಾಂಗೋಪಸಾಂಗವಾಗಿ ನಡೆಯುತ್ತಲೇ ಇರುತ್ತದೆ.

ಹುಟ್ಟಿನಿಂದಲೇ ಪ್ರಾರಂಭವಾಗುವ ತಾರತಮ್ಯ ಮಕ್ಕಳು ಬೆಳೆಯುತ್ತಾ ಹೋದಂತೆ ಹೆಚ್ಚುತ್ತಲೇ ಹೋಗುವುದರ ಮೂಲಕ ಹೆಣ್ಣು ಮಕ್ಕಳು ಆ ತಾರತಮ್ಯಕ್ಕೆ ಒಗ್ಗಿಕೊಂಡು ಬಿಟ್ಟಿರುತ್ತಾರೆ. ಮೊದಲನೆಯ ಮಗಳಾದಿ ಹುಟ್ಟಬೇಡ, ಹಿತ್ತಲ ಬಾಗಿಲಾಗ ಬೇಡ - ಎಂಬ ಗಾದೆಯ ಮಾತಿನಂತೆ ಹಿರಿಯ ಮಗಳು ಎಲ್ಲಕ್ಕೂ, ಎಲ್ಲರಿಗೂ, ಎಲ್ಲ ಕಾಲದಲ್ಲೂ ಬೇಕೇಬೇಕು. ತಮ್ಮ, ತಂಗಿಯರನ್ನು ನೋಡಿಕೊಳ್ಳುವ ಜವಾಬ್ದಾರಿ, ಮನೆಗೆಲಸ, ಬೇಸಾಯದ ಮನೆಯಾದರೆ ಹೊಲಗದ್ದೆಗಳ ಕೆಲಸ ........ ಇವುಗಳ ನಡುವೆ ಆಕೆ ತನ್ನ ಸ್ವಂತ ಅಭಿಪ್ರಾಯಗಳನ್ನು ಕಳೆದುಕೊಳ್ಳುವುದರ ಮೂಲಕ ತನ್ನನ್ನೇ ಕಳೆದುಕೊಂಡಿರುತ್ತಾಳೆ ಎನ್ನಬಹುದು. ಹಿರಿಯನಾದ ಸೋದರನಿದ್ದರ ಅವನಿಗೆ ಸಿಗುವ ರಾಜಮರ್ಯಾದೆ, ಹಿರಿಮೆಗರಿಮೆಗಳನ್ನು ಕಂಡು ಆಕೆ ಅಸೂಯೆಪಡುವುದಕ್ಕಿಂತ ಅದೆ ಸರಿಯಾದ ರೀತಿ ಎಂದು ಭಾವಿಸುವುದಷ್ಟೇ ಅಲ್ಲ. ನಾಳೆ ತಾನು ತಾಯಿಯಾದ ಮೇಲೂ ಅದೇ ಸಂಪ್ರದಾಯ ಅನುಸರಿಸುತ್ತಾಳೆನ್ನುವುದು ಅತಿಶಯೋಕ್ತಿಯಲ್ಲ. ಗ್ರಾಮೀಣ ಪರಿಸರದಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಹೆಚ್ಚಿನ ಆಸಕ್ತಿ ನೀಡಲು ಅಗತ್ಯವಾದ ವಾತಾವರಣ ಇರುವುದು ಅಪರೂಪ "ಎಷ್ಟು ಓದಿದ್ರೇನ್ ಬೂದಿ ತೆಗೆಯೋದು ತಪ್ಪಲ್ಲ" ಎಂಬ ಮಾತಿಗೆ ಇನ್ನೂ ಜೀವವಿದೆ. ಹೆಣ್ಣುಮಕ್ಕಳೇ ಹೆಚ್ಚು ಇರುವ ತಾಯಿ ತಂದೆಯರು ಸಮಾಜದ ಕಣ್ಣಲ್ಲಿ "ಅಯ್ಯೋ ಪಾಪ!" ಎಂಬ ಮರುಕಕ್ಕೆ ಪಾತ್ರರಾಗುತ್ತಾರೆ. ಸಾಲುಗಟ್ಟಲೇ ಹೆಣ್ಣುಮಕ್ಕಳಿದ್ದರೂ ತಾಯ್ತಂದೆಯರಿಗೆ ಕುಲಪುತ್ರನನ್ನು ಪಡೆಯುವ ಹುಚ್ಚು. ಹಾಗೆಂದು ಹುಟ್ಟಿದ ಹೆಣ್ಣು ಮಕ್ಕಳನ್ನು ಚೆನ್ನಾಗಿ ಬೆಳೆಸಬಹುದೆಂದು ತಿಳಿಯುವಂತಿಲ್ಲ. ಹೆಣ್ಣುಮಕ್ಕಳು ಮಕ್ಕಳೇ ಅಲ್ಲ ಎನ್ನುವ ಧೋರಣೆ ಹೊಸತಲ್ಲ, ಗಂಡುಮಗ ಹುಟ್ಟಿದನೆಂದರೆ ಎಷ್ಟೇ ಬಡತನವಿರಲಿ, ಅವನಿಗೆ ಇಷ್ಟಪಟ್ಟು "ರಾಜೋಪಚಾರ". ಮೊದಲೆ ಹೆಣ್ಣೆಂದರೆ ಅನಾದರ, ಅದರಲ್ಲೂ ಅವರ ಸಂಖ್ಯಾಬಲವೇರಿದ್ದರೆ ಅವರ ಸ್ಥಿತಿ ಹೇಗಿರಬಹುದೆಂದು ಹೇಳಲೇಬೇಕಿಲ್ಲ.

ಸೋಮಕ್ಕನ ತಾಯಿ ತಂದೆಯರಿಗೆ ೬ ಜನ ಮಕ್ಕಳು. ಅವರಲ್ಲಿ ೩ ಹೆಣ್ಣು, ೩ ಗಂಡು. ಮೊದಲನೇ ಮಗ ಅಪಾಪೋಲಿ, ಅಥವಾ ಕೇರ್ ಆಫ್ ಫುಟ್‌ಪಾತ್ ಎಂದರೇನೆ ಸರಿಯಾದೀತು. ಅವನಿಗೆ ಓದಿನಲ್ಲಿ ಏನೇನೂ ಆಸಕ್ತಿಯಿಲ್ಲ. ತಂದೆ ನಡೆಸುವ ವ್ಯಾಪಾರ, ವಹಿವಾಟು ತಲೆಗೇ ಹೋಗದು. ಸಾಧ್ಯವಾಷ್ಟು ತಂದೆ ತಾಯಿಯರು ದುಡ್ಡು ಖರ್ಚು

ಮಾಡಿದರು ಮಗನ ಓದಿಗೆ–ಫಲ ನೀಡಲಿಲ್ಲ. ಹಾಗೆ ಬಿಟ್ಟರು, ಹೆಚ್ಚು ಬುದ್ಧಿಮಾತು ಹೇಳರು — ಏಕೆಂದರೆ ಮಗನ ಮನಸ್ಸಿಗೆ ನೋವಾದರೆ? ಮನೆಬಿಟ್ಟು ಓಡಿಹೋದರೆ? (ಹಿಂದೊಮ್ಮೆ ಈ ಅನುಭವವಾಗಿತ್ತು) ಎಂಬ ಆತಂಕ. ಆತನ ತಂಗಿ ಸೋಮಕ್ಕ ಚೂಟಿಯಾದ ಹುಡುಗಿ. ವ್ಯಾಪಾರ ನಡೆಸಬಲ್ಲ ಅವಳ ಚಾಣಾಕ್ಷತೆಯೇ ಈಗ ಅವಳ ವಿದ್ಯಾಭ್ಯಾಸಕ್ಕೆ ತಡೆಯನ್ನೊಡ್ಡಿದೆ. ವಿದ್ಯೆಯ ಬಗ್ಗೆ ಸಾಕಷ್ಟು ಆಶಾಗೋಪುರ ಕಟ್ಟಿದ ೧೫ವರ್ಷದ ಈ ಹುಡುಗಿ ಕುಸಿದ ಕನಸಿನ ಗೋಪುರವನ್ನು ನೆನೆಯುತ್ತಾ ಅಂಗಡಿಯಲ್ಲಿ ಕುಳಿತು ವ್ಯಾಪಾರ ಮಾಡುತ್ತಾಳೆ.

ಪದ್ಮಳಿಗೆ ನಾಲ್ಕೈದು ಜನ ಅಣ್ಣತಮ್ಮಂದಿರು, ತಾಯ್ತಂದೆಯರಿಗೆ ಒಬ್ಬಳೇ ಮಗಳು, ಹಾಗೆಂದು ಸುಖವಾಗಿರುವಳೆಂದು ಭಾವಿಸಬೇಡಿ. ೭ರ ವರೆಗೆ ಶಾಲೆಗೆ ಹೋದಳು. ನಂತರ ಅವಳಿಂದ ಸ್ಕೂಲಿಗೆ ನಮಸ್ಕಾರ ಹಾಕಿಸಿದರು ಮನೆಯಲ್ಲಿ. ಕಾರಣ ಅನಾರೋಗ್ಯ. ಪದ್ಮಳಿಗೆ ಇದಕ್ಕಿದ್ದಂತೆ ಮೆದುಳು ಜ್ವರ ಪ್ರಾರಂಭವಾಗಿ ಅವಳ ಜೀವಕ್ಕೆ ಅಪಾಯವುಂಟಾಗಿತ್ತು ಆದರೆ ಡಾಕ್ಟರ ಬಳಿ ಕರೆದೊಯ್ದದ್ದು ಸುತ್ತಮುತ್ತಲಿನವರು ಬೈಯ್ದು ಹೊರಡಿಸಿದ ಮೇಲೆ. ಅಲ್ಲಿ ವೈದ್ಯರಿಂದ "ನಿಮಗೆಲ್ಲ ಏಕ್ರೀ ಮಕ್ಕಳು" ಎಂದು ಛೀಮಾರಿ ಹಾಕಿಸಿಕೊಂಡು ಬಂದ ತಂದೆ ಮಹಾಶಯ. ಸರಿ ಆಸ್ಪತ್ರೆಯಿಂದ ಬಂದ ಮೇಲೂ, ಅವಳು ಕುಳಿತರೆ, ನಿಂತರೆ ಅವಳಿಗೆ, ಅವಳ ರೋಗಕ್ಕೆ ಖರ್ಚುಮಾಡಿದ್ದ ದುಡ್ಡಿನ ಲೆಕ್ಕ ಹೇಳುವುದು, ಡಾಕ್ಟರು ಆಕೆಗೆ ವಿಶ್ರಾಂತಿ ಅಗತ್ಯವೆಂದರೂ ಆಕೆಯಿಂದ ಕೆಲಸಮಾಡಿಸುವುದು. ಮೆದುಳು ಜ್ವರದ ಪ್ರಾರಂಭದಲ್ಲೇ ಗಮನಿಸಿದ್ದರೆ ಅವಳ ವಿದ್ಯೆಯೂ ನಿಲ್ಲುತ್ತಿರಲಿಲ್ಲ, ಈಗಿನ ನಿಶ್ಶಕ್ತಿಯೂ ಇರುತ್ತಿರಲಿಲ್ಲ. ಈಕೆಗೆ ಕಾಯಿಲೆಯಾಗಿ ಶಕ್ತಿಯಿಲ್ಲದೆ ಈಗಲೂ ಆಗಾಗ ಜ್ಞಾನ ತಪ್ಪುತ್ತದೆ. ಆದರೆ ತಾಯಿತಂದೆಗೆ ಮಗಳ ಬಗ್ಗೆ ಕಾಳಜಿಯಿಲ್ಲ. ಗಂಡು ಮಕ್ಕಳಿಗೆ ಏನೇನೂ ಕೆಲಸವಿಲ್ಲ ಮಾತ್ರವಲ್ಲ ಹಣ್ಣು ಹಂಪಲು ಹಾಲು ಎಲ್ಲವೂ ಧಾರಾಳ. ವೈದ್ಯರು ಪದ್ಮಳನ್ನು ಸರಿಯಾಗಿ ನೋಡಿಕೊಳ್ಳಬೇಕು, ಪೌಷ್ಟಿಕ ಆಹಾರ ಅವಳಿಗೆ ಅತ್ಯಗತ್ಯ ಎಂದು ಇನ್ನಿಲ್ಲದಷ್ಟು ಬಾರಿ ಹೇಳಿದ್ದಾರೆ. ಆದರೆ ಆ ಬಗ್ಗೆ ಎಲ್ಲರಿಗೂ ನಿರಾಸಕ್ತಿ ಮಗಳಿಗೇನಾದರೂ ಆದರೆ? ಎಂದು ಹಿತೈಷಿಯೊಬ್ಬರು ಕೇಳಿದ ಪ್ರಶ್ನೆಗೆ "ಹಣೇಲಿ ಬರ್‌ದಂಗಾತದೆ" ಎಂಬ ವೇದಾಂತ ಉತ್ತರವಾಗಿತ್ತು. ಈಗೀಗಂತೂ ಡಾಕ್ಟರ ಬಳಿ ಹೋಗುವುದೇ ಇಲ್ಲ. ಏಕೆಂದರೆ ಹೋದರೆ ತಾನೆ ಎಲ್ಲ ರಗಳೆ!

ಮಗಳಿಗೆ ತಕ್ಕ ಗಂಡನ್ನು ಹುಡುಕಬೇಕಾಗುವುದಲ್ಲ ಎಂಬ ಕಾರಣಕ್ಕೆ ಮಗಳ ವಿಧ್ಯಾಭ್ಯಾಸ ನಿಲ್ಲಿಸುವವರು ಲೆಕ್ಕವಿಲ್ಲದಷ್ಟು ಮಂದಿ ಇದ್ದಾರೆ. ಬೇರೆಯವರ ಮನೆಗೆ ಹೋಗುವವಳು ಎಂಬ ಔದಾಸೀನ್ಯದಿಂದಾಗಿ ಉತ್ತಮವಾದ ಮಾನಸಿಕ, ದೈಹಿಕ ಬೆಳವಣಿಗೆಗೆ ಪೂರಕವಾಗುವಂಥ ಆರೋಗ್ಯಕರ ಪರಿಸರವಿರುವುದಿಲ್ಲ. ಇಂತಹ ಪರಿಸರದಲ್ಲಿ ಬೆಳೆದ ಹೆಣ್ಣುಮಗಳು ತನ್ನ ಹಿರಿಯರ ಪರಂಪರೆಯನ್ನೇ ಮುಂದುವರೆಸುವಳಲ್ಲದೆ ಅವಳಿಂದ ಸುಧಾರಣೆ ಬಯಸುವುದು ಮೂಢತನವೆನಿಸೀತು. "ಸ್ತ್ರೀ ಬುದ್ಧಿ ಪ್ರಳಯಾಂತಕ", "ಹೆಣ್ಣೇ ಎಲ್ಲ ಅನಿಷ್ಟಕ್ಕೂ ಮೂಲ" ಎಂದು ಮಹಾಗ್ರಂಥಗಳನ್ನು ಉದಹರಿಸುತ್ತಾರೆ. ನಿಜ, ಎಂದೇ ಒಪ್ಪಿಕೊಂಡಲ್ಲಿ — ಆ ಮಹಾಗ್ರಂಥಗಳಲ್ಲಿ ಉಲ್ಲೇಖಿತವಾದ ಘಟನೆಗಳು ಮಹಿಳೆಗೂ ವ್ಯಕ್ತಿತ್ವವಿದೆ ಎಂದು ಭಾವಿಸದೆ ನಡೆಸಿಕೊಂಡರೆ ಭವಿಷ್ಯದಲ್ಲಿ ಅನುಭವಿಸಬೇಕಾಗುವ ಫಲಗಳನ್ನು ಸೂಚಿಸುತ್ತವೆ ಎನ್ನಬಹುದಲ್ಲವೆ? ಮಣ್ಣು, ಹೊನ್ನಿನಂತೆ ಹೆಣ್ಣನ್ನೂ ವಸ್ತುವನ್ನಾಗಿ ಪರಿಗಣಿಸಿದ್ದರಿಂದ, ಅವಳ ಮೇಲೆ ಸ್ವಾಮಿತ್ವ ಸ್ಥಾಪಿಸಲು ಹೋರಾಡುವ ಮನುಷ್ಯ ಅವಳ ಭಾವನೆಗೆ, ಅಭಿಪ್ರಾಯಗಳಿಗೆ ಬೆಲೆ ನೀಡದಿದ್ದುದಕ್ಕೆ ತೆರಬೇಕಾದ ಬೆಲೆಯಲ್ಲದೆ ಮತ್ತೇನಲ್ಲ.

ಹೆಣ್ಣೇ ಹೆಣ್ಣಿಗೆ ಶತ್ರು, ಹೆಂಗಸರಿಗೆ ಮೂಢನಂಬಿಕೆಗಳು ಜಾಸ್ತಿ ಎಂಬ ಮಾತಿದೆ. ನಾಲ್ಕು ಗೋಡೆಗಳ ಮಧ್ಯೆ ಅವರ ಪ್ರಪಂಚವನ್ನ ಅಡಗಿಸಿದರೆ ಮನೋವಿಕಾಸವಾಗದು, ಆಲೋಚನಾ ವ್ಯಾಪ್ತಿ ಕಿರಿದಾಗಿ ಮೂಢನಂಬಿಕೆ, ಅನಾರೋಗ್ಯಕರ ಸಂಪ್ರದಾಯಗಳು ಹೆಚ್ಚುತ್ತವೆ ಎಂಬ ಅಂಶ ಮರೆಯುವಂತಹುದಲ್ಲ. ಏಕೆಂದರೆ ಆತ | ಆಕೆಗೆ ಬಾಲ್ಯದಲ್ಲಿ ದೊರೆವ ಶಿಕ್ಷಣ, ಸುತ್ತಮುತ್ತಲ ವಾತಾವರಣ, ರೀತಿನೀತಿಗಳು ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ವಹಿಸುತ್ತವೆ.

ಶ್ರೀಮತಿ

## ನಾ ಏನ ದಾಖಲಿಸಲಿ?

ನೀ ಕಂಡದ್ದು, ಕೇಳಿದ್ದು
ಅನುಭವಿಸಿದ್ದು
ಎಲ್ಲವೂ ದಾಖಲು
ಚರಿತ್ರೆಯ ಪುಟಗಳಲ್ಲಿ
ಎಲ್ಲವು ನಿನ್ನದೆ
ನಿನಗಾಗೇ ಎಲ್ಲವು

ನಾ ಕಂಡದ್ದೇನು?
ಅನುಭವಿಸಿದ್ದೇನು
ಏನ ದಾಖಲಿಸಲಿ ನಾ?

ಉರಿದು ಹೋದ 'ರೂಪ'
ಸತಿಯಾದದ್ದ ಚರಿತ್ರೆಯ
ಪುಟಕ್ಕೆ ಸೇರಿಸಲೆ?
ಅಡುಗೆ ಮನೆಯಲ್ಲಿ
ಸವೆದು ಹೋದ ಅವ್ವಂದಿರ
ಬಗ್ಗೆ ಕವನ ಕಟ್ಟಿ ಹಾಡಲೆ?
ಕತ್ತಲಿಗೆ ಬೆಚ್ಚಿ ಕದ ಕಿಟಕಿ
ಮುಚ್ಚಿ, ಫ್ಯಾನ್ ಹಾಕಲು
ತೋಚದೆ ಬೆವತು ನೀರಾದ
ಕಥೆ ಹೇಳಲೆ?

ರಕ್ತ ಬಸಿದು ಕಣ್ಣೀರ ಬೆರಸಿ
ಪುಟ್ಟ ಲೋಲಾಕು, ಕಾಲ್ಗೆಜ್ಜೆ
ಚಿತ್ರಿಸಿದರೆ
ಸುಳಿವಿಲ್ಲದಂತೆ ಒರೆಸಿದ್ದನ್ನ
ಎಲ್ಲರೆದುರೂ ಗೋಳಾದರೆ?
ಹೇಳು ಏನ ದಾಖಲಿಸಲಿ?

**ಸರಸ್ವತಿ ದು.**

## "ವರದಕ್ಷಿಣೆಯ ನೋವು"

'ವರದಕ್ಷಿಣೆಯ ನೋವು'—ನಮ್ಮ ದೇಶದಲ್ಲಿ ಪ್ರೇಮ ಪ್ರೀತಿ, ವರದಕ್ಷಿಣೆ ಬಡವ, ಬಲ್ಲಿದ ಮೇಲು ಕೀಳು ಎಂಬ ಭಾವನೆ ನಮ್ಮ ಜನರಲ್ಲಿ ಬಹಳ ಹೆಚ್ಚು. ಗಂಡಸರ ದೌರ್ಜನ್ಯದಿಂದ ಎಷ್ಟೋ ಜನ ಹೆಣ್ಣುಮಕ್ಕಳು ಪ್ರಾಣಕಳೆದುಕೊಂಡಿದ್ದಾರೆ. ಈ ರೀತಿ ಹೆಣ್ಣುಮಕ್ಕಳ ಬಾಳನ್ನು ಹಾಳುಮಾಡುವುದೆ ಆಸೆ ಅವರಿಗೆ.

ಹೆಣ್ಣು ಮದುವೆಯಾಗಿ ಗಂಡನ ಮನೆ ಸೇರಿ 3-4 ತಿಂಗಳಲ್ಲಿ ಅತ್ತೆ, ಮಾವ, ಗಂಡ ಎಲ್ಲರೂ ಎಷ್ಟು ಪೀಡಿಸುತ್ತಾರೆಂದರೆ ಹೇಳಲು ಅಸಾಧ್ಯ. ತಂದೆ ವರದಕ್ಷಿಣೆ ಕೊಟ್ಟಿಲ್ಲ ಎಂಬ ಒಂದೇ ಕಾರಣದಿಂದ ಹೆಣ್ಣು ಮನೆಯ ದೀಪ ಎಂದು ಕಾಣದೆ ಅವಳನ್ನು ಜರಿದು ಹೊಡೆದು ಹೊಡೆದು ತಂದೆಯ ಮನೆಗೆ ಕಳಿಸುತ್ತಾರೆ. ಅಲ್ಲಿ ತಂದೆಯ ಮುಂದೆ ತನ್ನ ದುರಂತ ಕಥೆ ಇಟ್ಟರೆ ಹೆಣ್ಣಿನ ಬಾಳೆ ಕಣ್ಣೀರು ಎಂದು ತನ್ನ ದುಃಖ ಹೇಳಿಕೊಳ್ಳುತ್ತಾನೆ. ಆ ಹೆಣ್ಣು ತಂದೆ ಕಡು ಬಡವ ಎಂದು ಮರುಗಿ ಮತ್ತೆ ಗಂಡನ ಮನೆ ಸೇರುತ್ತಾಳೆ. ಮತ್ತೆ ಅತ್ತೆ ಸೊಸೆಯರ ಜಗಳ ಪ್ರಾರಂಭವಾಗುತ್ತದೆ. ಅತ್ತೆಯ ಹಿಂಸೆಯನ್ನು ಯಾರ ಜೊತೆಯಲ್ಲೂ ಹೇಳದೇ ಹಗಲು ಇರುಳು ಎನ್ನದೇ ದುಡಿಯುತ್ತಾಳೆ. ಅಂಥದ್ರಲ್ಲು ಅತ್ತೆ, ಮಾವ, ಗಂಡ ಒಡಗೂಡಿ ಸೀಮೆಎಣ್ಣೆ ಸುರಿದು ಅವಳಿಗೆ ಬೆಂಕಿ ಹಚ್ಚುತ್ತಾರೆ, ಇಲ್ಲ ನೇಣು ಹಾಕಿ ಕೊಂದು ಯಾವುದೋ ನೆಪಹೂಡಿ ನಟನೆ ಮಾಡುತ್ತಾರೆ. ಅಳುತ್ತಾರೆ. ಇಲ್ಲವಾದರೆ ಹೆಣ್ಣು ಹಿಂಸೆ ತಾಳದೆ ತಾನೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇಂಥ ಕಷ್ಟಗಳನ್ನು ಎಷೋ ಹೆಣ್ಣು ಮಕ್ಕಳು ಪಡುತ್ತಿದ್ದಾರೆ.

**ಹೆಚ್. ಕೆ. ಗುರುರಾಜ**
**ಬಿ. ಹೊಸೂರು**
(16 ವರ್ಷದ ಬಾಲಕ)

---

18ನೇ ಪುಟದಿಂದ

ಗೆಲ್ಲಲು ಅರ್ಹವಾದುದು ಎಂಬ ಪೂರ್ವಗ್ರಹ ಪೀಡಿತ ಭಾವನೆ ರೂಢಿಯಾಗಿ ಬಿಟ್ಟಿದೆ. ಪುರುಷರ ಬಲಾಢ್ಯತೆಯನ್ನು ಪ್ರಧಾನವಾಗಿ ಪರಿಗಣಿಸುವ ಈ ಧೋರಣೆ, ಅತಿ ಉದ್ದ ಕಾಲು, ಅಸಹಜ ಎತ್ತರ ಹೆಣ್ಣೆಗಿಲ್ಲದ ಅಂಶಗಳನ್ನು ಅಸಹಜವೆಂದು ಪರಿಗಣಿಸುವುದಿಲ್ಲ.

ಖ್ಯಾತ ಆಟಗಾರ್ತಿಯರೇ ಈ ಪರೀಕ್ಷೆಗೆ ಅನಿವಾರ್ಯವೆಂಬಂತೆ ಒಪ್ಪಿಕೊಳ್ಳುತ್ತಿದ್ದಾರೆ. ಭಾಗವಹಿಸಿದ ಕ್ರೀಡೆಯಲ್ಲಿ ಗೆಲ್ಲಲೇಬೇಕೆಂಬ ಮಹತ್ವಾಕಾಂಕ್ಷೆ, ನಿರಂತರ ಸಾಧನೆ ಮುಂತಾದವುಗಳು ಈ ಪರೀಕ್ಷೆಯ ಹಿಂದಿರುವ ಪ್ರಶ್ನೆಗಳನ್ನು ಗೌಪ್ಯವಾಗಿಸಿ, ಮೌನವಾಗಿ ಸಮ್ಮತಿಸುವಂತೆ ಮಾಡಿವೆ. ಈ ಪರೀಕ್ಷೆಯ ಪರಿಣಾಮಗಳು ಆಟಗಾರ್ತಿಯೊಬ್ಬಳ ಸಾಮಾಜಿಕ ಹಾಗೂ ವೈಯಕ್ತಿಕ ಜೀವನದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ.

(ಸಾಭಾರ)

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ, ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು — ೫೬೦೦೬೭.

ನಂ ಮ್ಯಾಗ್(5)ಪಿಆರ್‌ಬಿ ಡಿಕ್ಲೇರ್ಡ್: 284 | 8889

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : "ಮಾನಸ"
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067